RNI No. KARKAN/2007/22111 ಸಂಪುಟ 12 ಸಂಚಿಕೆ 4 ಜನವರಿ 2018 ಬೆಲೆ ರೂ. 15/-



ಐಹಿಕ ಮತ್ತು ಪಾರತ್ರಿಕ ವಿಜಯದ ಹಾದಿ

# الصراط المستقيم
# ಸಿರಾತೇ ಮುಸ್ತಖೀಮ್

ಜಮೀಯತೇ ಅಹ್ಲೆ ಹದೀಸ್ ಕರ್ನಾಟಕ-ಗೋವಾ ಇದರ ಮುಖವಾಣಿ

ಸತ್ಯವಿಶ್ವಾಸಿಗಳ ಕೈಪಿಡಿ



## ಮುಸಲ್ಮಾನರೇ ಎದ್ದೇಳಿ!

ಕುರ್‌ಆನ್ ಮತ್ತು ಸುನ್ನತ್ತಿನ ಆಧಾರದಲ್ಲಿ ಒಟ್ಟುಗೂಡಿ!

الله

## ಅಲ್ಲಾಹನ

ನಾಮ ಮತ್ತು ವಿಶೇಷಣಗಳು





# الصراط المستقيم

ಐಹಿಕ ಮತ್ತು ಪಾರತ್ರಿಕ ವಿಜಯದ ಹಾದಿ

# ಸಿರಾತೇ ಮುಸ್ತಖೀಮ್

ಸತ್ಯವಿಶ್ವಾಸಿಗಳ ಕೈಪಿಡಿ

ಸಂಪುಟ 12  ಸಂಚಿಕೆ 04

الربيع الثاني ١٤٣٩ هـ

**ಜನವರಿ 2018**

ಮಾಲಕರು, ಮುದ್ರಕರು ಮತ್ತು ಪ್ರಕಾಶಕರು:

**ಮುಹಮ್ಮದ್ ಅಲಿ**

ದಾವಾ ಪಬ್ಲಿಕೇಶನ್ಸ್,
ಹಿರಾ ಕಾಂಪ್ಲೆಕ್ಸ್,
ಡೋರ್ ನಂ. 2-184/11,
2 ನೇ ಬ್ಲಾಕ್, ಕಾಟಿಪಳ್ಳ ಪೋಸ್ಟ್,
ಮಂಗಳೂರು - 575 030

ಸಂಪಾದಕರು:

**ಪಿ. ಅಬ್ದುಸ್ಸಲಾಂ ಕಾಟಿಪಳ್ಳ**

Mob: 9986282449
Email: asshahadat@yahoo.co.in

ಮುಖಪುಟ ವಿನ್ಯಾಸ:

**ಎ.ಎಸ್ಕೆ.**

ಮುದ್ರಣ:

Akshara Printers,
2nd Block, Katipalla,
Mangaluru. D.K.


## ಒಳಪುಟಗಳಲ್ಲಿ

### ಸಂಪಾದಕೀಯ



### ಈ ಸಂಚಿಕೆಯಲ್ಲಿ



### ಸ್ಥಿರ ಶೀರ್ಷಿಕೆಗಳು




Printed, published & owned by Muhammad Ali, Dawa Publications, Hira Complex, 2-184/11, 2nd Block, Katipalla Post, Mangaluru - 575 030. Editor: P. Abdussalam, Printed at: Akshara Printers, 2nd Block, Katipalla Post, Mangaluru. D. K. KARNATAKA

ಸಂಪಾದಕೀಯ

بسم الله الرحمن الرحيم

الحَمْدُ لِلهِ رَبِّ العَالَمِينَ الصَّلاَةُ وَالسَّلاَمُ عَلَى أَفْضَلِ الأَنْبِيَاءِ وَالمُرْسَلِينَ
وَعَلَى آلِهِ وَصَحْبِهِ أَجْمَعِينَ أَمَّا بَعْدُ

# ಫಿತ್ನದ ಎರಡು ದಾರಿಗಳು

ಇದು ವಿವಿಧ ರೀತಿಯ ಫಿತ್ನ(ಗೊಂದಲ) ಗಳು ಸಮಾಜದಲ್ಲಿ ವ್ಯಾಪಿಸಿಕೊಂಡಿರುವ ಸಂದರ್ಭವಾಗಿದೆ. ಧಾರ್ಮಿಕ ರಂಗವೂ ಇದರಿಂದ ಹೊರತಾಗಿಲ್ಲ. ಧಾರ್ಮಿಕ ರಂಗದಲ್ಲಿರುವ ಫಿತ್ನಗಳನ್ನು ಅವಲೋಕಿಸಿದರೆ ಅದರ ಹಿನ್ನೆಲೆಯಲ್ಲಿ ಎರಡು ಕಾರಣಗಳಿರುವುದು ಕಂಡುಬರುತ್ತದೆ. ನೈಜ ಜ್ಞಾನದ ಕೊರತೆ ಅವುಗಳಲ್ಲಿ ಒಂದಾಗಿದೆ. ಒಬ್ಬ ಸತ್ಯವಿಶ್ವಾಸಿಯ ಪ್ರಾಥಮಿಕ ಜ್ಞಾನ 'ಲಾ ಇಲಾಹ ಇಲ್ಲಲ್ಲಾಹ್' ಎಂದಾಗಿರಬೇಕಷ್ಟೆ. ಆದರೆ ಅದನ್ನು ನಾಲಗೆಯಿಂದ ಉಚ್ಚರಿಸುವುದರ ಆಚೆಗೆ ಅದರ ಕುರಿತು ಯಾವುದೇ ಜ್ಞಾನವಿರದಿದ್ದರೆ ಹಲವು ಸಮಸ್ಯೆಗಳಿಗೆ ಕಾರಣವಾಗುತ್ತದೆ. 'ಲಾ ಇಲಾಹ ಇಲ್ಲಲ್ಲಾಹ್' ಎಂದು ಉಚ್ಚರಿಸುವವರು ಗೋರಿಗಳ ಬಳಿಗೆ ತೆರಳುತ್ತಿರುವುದು ಕಲಿಮತುತ್ತೌಹೀದ್‌ನ ನೈಜ ಜ್ಞಾನದ ಕೊರತೆಯಿಂದಾಗಿದೆ.

ನಮ್ಮ ಹೆಣ್ಮಕ್ಕಳು ರಾಖಿ ಕಟ್ಟಲು ಅನ್ಯಮತೀಯರ ಮುಂದೆ ಕೈಚಾಚುವುದು ಅವರಿಗೆ ಕಲಿಮತುತ್ತೌಹೀದ್‌ನ ಕುರಿತು ಸರಿಯಾದ ಜ್ಞಾನ ಇಲ್ಲದಿರುವ ಕಾರಣದಿಂದಾಗಿದೆ. ಕಬ್ರ್, ಗೋರಿ ಸಂದರ್ಶನ, ಜ್ಯೋತಿಷ್ಯದ ಮೊರೆ ಹೋಗುವುದರ ಕಾರಣವೂ ಭಿನ್ನವಲ್ಲ.

﴿قُلْ هَلْ يَسْتَوِي الَّذِينَ يَعْلَمُونَ وَالَّذِينَ لَا يَعْلَمُونَ﴾

"ಹೇಳಿರಿ: ಜ್ಞಾನವಿರುವವರು ಜ್ಞಾನವಿಲ್ಲದವರು ಸಮಾನರಾಗುವರೇ?" (ಕುರ್‌ಆನ್ 39:9) ಎಂಬ ವಚನವು ಅಜ್ಞಾನದ ಅಪಾಯವನ್ನು ವ್ಯಕ್ತಿಗೊಳಿಸುತ್ತದೆ.

﴿وَلَا تَقْفُ مَا لَيْسَ لَكَ بِهِ عِلْمٌ﴾

"ನೀವು ಜ್ಞಾನವಿಲ್ಲದವುಗಳ ಕುರಿತು ಏನನ್ನೂ ಹೇಳದಿರಿ" (ಕುರ್‌ಆನ್ 17:36) ಎಂದು ಅಲ್ಲಾಹನು ನಿಷೇಧಿಸಿರುವುದು ಈ ಫಿತ್ನವನ್ನು ತಡೆಯಲಿಕ್ಕಾಗಿದೆ. ಜ್ಞಾನವಿಲ್ಲದವರ ಫಿತ್ನ ಇಂದು ಸಮುದಾಯದಲ್ಲಿ ವರ್ಧಿಸುತ್ತದೆ. ಇಂದು

ಪ್ರಮಾಣಗಳ ಕುರಿತು ಪ್ರಾಥಮಿಕ ಜ್ಞಾನವೂ ಇಲ್ಲದವರು ಸಾಮಾಜಿಕ ಜಾಲತಾಣಗಳಲ್ಲಿ ಸಂವಾದದ ತನಕ ಮುಂದುವರಿಯುತ್ತಾರೆ. ಕೊನೆಗೆ ಅದು ಅವರ ವಿಶ್ವಾಸವು ನಷ್ಟವಾಗಲು ಕಾರಣವಾಗುವುದಿದೆ. ವಿದ್ವಾಂಸರು ಮೃತಪಡುವಾಗ ಜನಸಾಮಾನ್ಯರು ಅಜ್ಞಾನಿಗಳನ್ನು ವಿದ್ವಾಂಸರೆಂದು ಪರಿಗಣಿಸಿ ಏನಾದರೂ ವಿಧಿ ಕೇಳಿದರೆ ಅವರು ಯಾವೊಂದು ಜ್ಞಾನವೂ ಇಲ್ಲದೆ ಫತ್ವಾ ನೀಡುವುದರ ಮೂಲಕ ತಾವು ಮಾತ್ರವಲ್ಲದೆ, ಬೇರೆಯವರನ್ನೂ ಪಥಭ್ರಷ್ಟತೆಯಲ್ಲಿ ಸಿಲುಕಿಸುವ ಪರಿಸ್ಥಿತಿ ನಿರ್ಮಾಣವಾಗುವುದೆಂದು ಪ್ರವಾದಿ(ﷺ) ರವರು ಮುನ್ನೆಚ್ಚರಿಕೆ ನೀಡಿರುವುದು ಈ ಫಿತ್ನದ ಕುರಿತಾಗಿದೆ.

ಇಬ್ನ್ ಹಝ್ಮ್(رحمه الله) ರವರ ಒಂದು ಮಾತು ಇಲ್ಲಿ ಉಲ್ಲೇಖಾರ್ಹವೆನಿಸುತ್ತದೆ. “ಇಲ್ಮ್ ಮತ್ತು ಅದರ ವಾರೀಸುದಾರರಿಗೆ ನೊಂದುಕೊಳ್ಳುವಂತೆ ಮಾಡಿದ ಒಂದು ಕಾರ್ಯವೇನೆಂದರೆ, ಅದು ಅಜ್ಞಾನಿಗಳು ಇದಕ್ಕೆ ಪ್ರವೇಶಿಸುವುದಾಗಿದೆ. ಅವರು ತಿಳುವಳಿಕೆ ಇಲ್ಲದವರಾಗಿರುತ್ತಾರೆ. ವಾಸ್ತವದಲ್ಲಿ ಅವರು ಗೊಂದಲ ಮಾಡಿಸುವವರಾಗಿರುವರು.”

ಇಂಟರ್ನೆಟ್ ಮತ್ತು ಸಾಮಾಜಿಕ ಜಾಲತಾಣಗಳ ಮುಂದೆ ಕುಳಿತು ಮಹಾ ಫಿತ್ನವಾಗಿ ಮಾರ್ಪಟ್ಟ ಕೆಲವರು ಸಮುದಾಯದಲ್ಲಿದ್ದಾರೆ. ಒಂದು ತುಂಡು ಫತ್ವಾ ಹಾಗೂ ಅರ್ಧ ತುಂಡು ಅರಬಿ ಸಮಾನವಾಗಿ ಸೇರಿದರೆ ಫಿತ್ನ ಹರಡುವ ಅರ್ಹತೆ ಲಭ್ಯವಾಯಿತು ಎಂಬಂತಹ ಪರಿಸ್ಥಿತಿ! ವಾಕ್ಚಾತುರ್ಯವಿರುವವರಾದರೆ ಸಾಕು, ಮತ್ತೇನೂ ನೋಡಬೇಕಿಲ್ಲ ಎನ್ನುವುದು ಒಂದು ಫಿತ್ನವಾಗಿ ಬೆಳೆದಿದೆ. ಇಮಾಮ್ ಇಬ್ನ್ ಸೀರೀನ್(رحمه الله) ಅವರ ಮಾತುಗಳನ್ನು ಗಮನಿಸಿರಿ. “ಈ ಜ್ಞಾನ ಎನ್ನುವುದು ಧರ್ಮವಾಗಿದೆ. ಆದುದರಿಂದ ನೀವು ಯಾರಿಂದ ದೀನ್ ಸ್ವೀಕರಿಸಬೇಕೆಂದು ಸರಿಯಾಗಿ ಪರಿಶೀಲಿಸಿರಿ.”

ಧರ್ಮನಿಷೇಧಿಗಳು ಮತ್ತು ಹದೀಸ್ ನಿಷೇಧಿಗಳೆಲ್ಲ ಕೆಲವರ ಉಸ್ತಾದರುಗಳಾಗಿದ್ದಾರೆ. ತನ್ನಿಮಿತ್ತ ಅದೆಷ್ಟೋ ಜನರ ವಿಶ್ವಾಸವು ಕೆಟ್ಟು ಹೋಗಿದೆ. ಕೆಲವರಿಗಂತೂ ಅದು ನಷ್ಟವೇ ಆಗಿದೆ. ಇಮಾಮ್ ಹೇಳಿದ ಮಾತು ಇಲ್ಲಿ ಗಮನಾರ್ಹ.

“ಪ್ರವಾದಿ(ﷺ) ಯವರು ಹೇಳಿರುವರೆಂದು ಹೇಳಿಕೊಂಡು ಹದೀಸ್ ವಿವರಿಸುವ ಎಪ್ಪತ್ತಕ್ಕಿಂತಲೂ ಹೆಚ್ಚಿನ ಜನರನ್ನು ನಾನು ಪ್ರವಾದಿ(ﷺ) ಯವರ ಮಸೀದಿಯಲ್ಲಿ ನೋಡಿದ್ದೇನೆ. ಅವರಿಗೆ ಬೈತುಲ್ ಮಾಲನ್ನು ಒಪ್ಪಿಸಿದರೆ ಅವರು ಅದನ್ನು ಪ್ರಾಮಾಣಿಕತೆಯಿಂದ ನಿರ್ವಹಿಸಬಹುದು. ಆದರೆ ಅವರಲ್ಲಿ ಯಾರಿಂದಲೂ ನಾನು ಜ್ಞಾನ ಸ್ವೀಕರಿಸಿಲ್ಲ. ಏಕೆಂದರೆ ಅವರು ಜ್ಞಾನದ ವಕ್ತಾರರಾಗಿರಲಿಲ್ಲ. ಅದೇ ಸಮಯ ಒಬ್ಬ ಯುವಕ ಮುಹಮ್ಮದ್ ಬಿನ್ ಶಿಹಾಬ್ ಝುಹ್ರಿ ಮಸೀದಿಗೆ ಆಗಮಿಸಿದರು. ನಾವು ಅವರ ಸಮೀಪ ಅಣಿ ನೆರೆದೆವು.”

ಇಮಾಮರ ಮೇಲಿನ ಮಾತುಗಳು ಯಾರಿಂದ ಜ್ಞಾನ ಸ್ವೀಕರಿಸಬೇಕು ಎನ್ನುವುದಕ್ಕೆ ಸ್ಪಷ್ಟವಾದ ದಿಕ್ಸೂಚಿಯಾಗಿದೆ. ಜ್ಞಾನವನ್ನು ಅದರ ನೈಜ ಮೂಲದಿಂದಲೇ ಬರಮಾಡಿಕೊಳ್ಳಬೇಕು. ಅನ್ಯಥಾ ಅಪಾಯ ಕಟ್ಟಿಟ್ಟ ಬುತ್ತಿ. ಇಮಾಮ್ ಶಾಫಿಈ(رحمه الله) ಯವರೂ ಹೀಗೆಯೇ ಹೇಳಿದ್ದಾರೆ.

“ಒಬ್ಬನು ಗ್ರಂಥಗಳಿಂದ ಮಾತ್ರ ಜ್ಞಾನ ಪಡೆದರೆ ಅವನಿಗೆ ಹಲವಾರು ವಿಧಿಗಳು ನಷ್ಟವಾಗುತ್ತದೆ.”

ಆದುದರಿಂದ ಜ್ಞಾನವನ್ನು ಅದರ ನೈಜ ಮೂಲದಿಂದ ಪಡೆಯಬೇಕು. ಹಾಗಾದರೆ ಫಿತ್ನದಿಂದ ರಕ್ಷಣೆ ಹೊಂದಬಹುದು. ಅನ್ಯಥಾ ಫಿತ್ನ ವರ್ಧಿಸುತ್ತಲಿರುತ್ತದೆ. ಅಲ್ಲಾಹು ಸಹಾಯ ಮಾಡಲಿ. ■

# ಮುಸಲ್ಮಾನರೇ ಎದ್ದೇಳಿ!
# ಕುರ್‌ಆನ್ ಮತ್ತು ಸುನ್ನತ್ತಿನ ಆಧಾರದಲ್ಲಿ ಒಟ್ಟುಗೂಡಿ!

ಶಿಯಾಗಳು, ಯಹೂದಿಗಳು ಮತ್ತು ಕ್ರೈಸ್ತರು ಪರಸ್ಪರ ದ್ವೇಷಿಸುತ್ತಾರೆಂದು ನೀವು ತಪ್ಪುತಿಳಿಯಬೇಡಿ. ಅವರು ಪರಸ್ಪರ ಮಿತ್ರರು. ಅವರಿಗೆ ಪರಸ್ಪರ ದ್ವೇಷವಿಲ್ಲ. ಅದು ಕಟ್ಟುಕಥೆ. ಈ ಸುಳ್ಳನ್ನು ನೀವೆಂದೂ ನಂಬಬೇಡಿ. ಇದು ನಿಮ್ಮ ಕಣ್ಣಿಗೆ ಮಣ್ಣೆರಚುವ ತಂತ್ರ. ಯಹೂದಿಗಳು, ಕ್ರೈಸ್ತರು ಮತ್ತು ಶಿಯಾಗಳು ಪರಸ್ಪರ ದ್ವೇಷಿಸುವುದಿಲ್ಲ. ಅವರೆಲ್ಲರೂ ದ್ವೇಷಿಸುವುದು ನಮ್ಮ ಈ ಸಲಫೀ ಮನ್‌ಹಜನ್ನು. ಅವರಲ್ಲಿ ಅನೇಕ ತತ್ವಜ್ಞಾನಿಗಳು ಮತ್ತು ಚಿಂತಕರಿದ್ದಾರೆ. ಅವರು ಇಸ್ಲಾಮನ್ನು ಕಲಿತಿದ್ದಾರೆ. ತಮ್ಮನ್ನು ಬಾಲದಂತೆ ಹಿಂಬಾಲಿಸುವ ಮತ್ತು ಇಸ್ಲಾಮ್ ಹಾಗೂ ಮುಸ್ಲಿಮರ ವಿರುದ್ಧ ತಮಗೆ ಸಹಾಯ ಮಾಡುವ ಗುಂಪುಗಳು ಯಾವುದೆಂದು ಅವರಿಗೆ ತಿಳಿದಿದೆ. ಸತ್ಯದಲ್ಲಿರುವ ಗುಂಪು ಯಾವುದೆಂದೂ ಅವರಿಗೆ ತಿಳಿದಿದೆ. ಈ ಗುಂಪು ಯಾವತ್ತೂ ಅವರಿಗೆ ಶರಣಾಗದೆಂದು ಅವರಿಗೆ ತಿಳಿದಿದೆ.

✍ ಶೈಖ್ ರಬೀಅ್ ಇಬ್ನ್ ಹಾದೀ ಅಲ್‌ಮದ್ಖಲೀ

ಇಂದಿನ ಮುಸಲ್ಮಾನರ ದುಸ್ಥಿತಿಯನ್ನು ಕಾಣುವಾಗ ಮನಸ್ಸು ನೋಯುತ್ತದೆ. ಹೃದಯ ಮಿಡಿಯುತ್ತದೆ. ಮುಸ್ಲಿಂ ಸಮುದಾಯವನ್ನು ರೋಗಗಳು ಆವರಿಸಿಕೊಂಡಿವೆ. ವಿಶ್ವಾಸ, ಮನ್‌ಹಜ್, ರಾಜಕೀಯ ಮುಂತಾದ ಎಲ್ಲ ಕ್ಷೇತ್ರಗಳಲ್ಲೂ ಅದು ಅವರನ್ನು ತಿನ್ನುತ್ತಿವೆ. ಆದರೆ ಅದರ ಚಿಕಿತ್ಸೆ ಅವರ ಮುಂದೆಯೇ ಇದ್ದರೂ ಅವರಲ್ಲಿ ಕೆಲವೇ ಜನರ ಹೊರತು ಇತರ ಯಾರೂ ಆ ಚಿಕಿತ್ಸೆಯನ್ನು ಇಷ್ಟಪಡುವುದಿಲ್ಲ. ಅವರು ತಮ್ಮ ಹಿತ್ತಲಲ್ಲೇ ಇರುವ ಚಿಕಿತ್ಸೆಯನ್ನು ಬಿಟ್ಟು ರೋಗ ಪರಿಹಾರ ಹುಡುಕುತ್ತಾ ಅತ್ತಿಂದಿತ್ತ ಚಲಿಸುತ್ತಿದ್ದಾರೆ.

ಈ ಎಲ್ಲ ರೋಗಗಳಿಗೆ ಸರಿಯಾದ ಚಿಕಿತ್ಸೆಯನ್ನು ನಮ್ಮ ರಬ್ಬ್ ಅಲ್ಲಾಹು ನಮಗೆ ತೋರಿಸಿಕೊಟ್ಟಿದ್ದಾನೆ. ಆದರೆ ದುರದೃಷ್ಟವ-ಶಾತ್ ಯಾರೂ ಆ ಕಡೆ ತಿರುಗುವುದಿಲ್ಲ. ಕುರ್‌ಆನಿನಲ್ಲಿ ರೋಗ ಶಮನವಿದೆಯೆಂದು ಅಲ್ಲಾಹು(ﷻ) ಹೇಳುತ್ತಾನೆ:

﴿قُلْ هُوَ لِلَّذِينَ ءَامَنُوا۟ هُدًى وَشِفَآءٌ﴾

“ಹೇಳಿರಿ: ಅದು ಸತ್ಯವಿಶ್ವಾಸಿಗಳಿಗೆ ಮಾರ್ಗದರ್ಶನ ಮತ್ತು ಉಪಶಮನವಾಗಿದೆ.” (ಕುರ್‌ಆನ್ 41:44)

﴿وَنُنَزِّلُ مِنَ ٱلْقُرْءَانِ مَا هُوَ
شِفَآءٌ وَرَحْمَةٌ لِّلْمُؤْمِنِينَ﴾

“ಸತ್ಯವಿಶ್ವಾಸಿಗಳಿಗೆ ಉಪಶಮನ ಮತ್ತು ಕರಣೆಯಾಗಿರುವುದನ್ನು ಅವನು ಕುರ್‌ಆನ್‌ನಿಂದ ಇಳಿಸಿಕೊಡುತ್ತಾನೆ.” (17:82)

ಕುರ್‌ಆನ್ ಈ ಎಲ್ಲಾ ರೋಗಗಳಿಗೆ ಉಪಶಮನವಾಗಿದೆ. ಅಲ್ಲಾಹನ ಮೇಲಾಣೆ! ಮುಸಲ್ಮಾನರು ಇಂದು ಯಾವ ದಯನೀಯ ಸ್ಥಿತಿಯ-ಲ್ಲಿದ್ದಾರೋ, ಯಾವ ಅಪಮಾನದಲ್ಲಿದ್ದಾರೋ, ಹೇಗೆ ಕಸಕಡ್ಡಿಗಳಂತೆ

ಯಾರಿಗೂ ಬೇಡವಾದ ಎಲ್ಲರಿಂದಲೂ ತಿರಸ್ಕರಿಸಲ್ಪಟ್ಟ ಹೀನಾಯ ಸ್ಥಿತಿಯಲ್ಲಿದ್ದಾರೋ ಅದರಿಂದ ಪಾರಾಗಬೇಕಾದರೆ ಅದಕ್ಕಿರುವುದು ಒಂದೇ ದಾರಿ. ಅದು ಕುರ್‌ಆನ್‌ನ ಕಡೆಗೆ ಮರಳುವುದು, ತಮ್ಮ ವಿಶ್ವಾಸ, ಆರಾಧನೆ, ಮನ್‌ಹಜ್, ರಾಜಕೀಯ ಮುಂತಾದ ಎಲ್ಲ ಕ್ಷೇತ್ರಗಳಲ್ಲಿಯೂ ಕುರ್‌ಆನನ್ನು ತೀರ್ಪುಗಾರನನ್ನಾಗಿ ಮಾಡಿಕೊಳ್ಳುವುದು. ಇದಲ್ಲದೆ ಅವರಿಗೆ ಬೇರೆ ಚಿಕಿತ್ಸೆಯಿಲ್ಲ.

ಆದರೆ ದುರದೃಷ್ಟವಶಾತ್, ವೈದ್ಯರು ಇತರ ಅನೇಕ ಚಿಕಿತ್ಸೆಗಳನ್ನು ತೋರಿಸುತ್ತಾರೆ. ಬಡಪಾಯಿ ಮುಸಲ್ಮಾನರು ಕುರ್‌ಆನನ್ನು ಬಿಟ್ಟು ಆ ವಿಷಕಾರಿ, ಮಾರಕ, ಅಡ್ಡ ಪರಿಣಾಮ ಬೀರುವ ಚಿಕಿತ್ಸೆಗಳ ಕಡೆಗೆ ಹೊರಳುತ್ತಿದ್ದಾರೆ. ಅದು ಅವರಿಗೆ ಇನ್ನಷ್ಟು ನೋವು, ನಿಂದನೆ, ಅವಮಾನ ಮತ್ತು ನಿಕೃಷ್ಟತೆಯನ್ನಲ್ಲದೆ ಇನ್ನೇನನ್ನೂ ಹೆಚ್ಚಿಸುವುದಿಲ್ಲ.

ಮುಸಲ್ಮಾನರ ಈ ದಾರುಣ ಸ್ಥಿತಿಯ ಬಗ್ಗೆ ಪ್ರವಾದಿಯವರು(ﷺ) 1400 ವರ್ಷಗಳ ಹಿಂದೆಯೇ ಮಾತನಾಡಿದ್ದಾರೆ. ಅದಕ್ಕಿರುವ ಚಿಕಿತ್ಸೆಯನ್ನೂ ಸೂಚಿಸಿದ್ದಾರೆ. ಮುಸಲ್ಮಾನರು ಇಂದು ಈ ದಯನೀಯ ಸ್ಥಿತಿಯಿಂದ ಹೊರಬರಲು ಇಚ್ಛಿಸಿದರೂ ಈ ಚಿಕಿತ್ಸೆಯನ್ನು ಸ್ವೀಕರಿಸಿಕೊಳ್ಳಲು ಇಚ್ಛಿಸುವುದಿಲ್ಲ. ಆದ್ದರಿಂದ ಅವರಿನ್ನೂ ಅದೇ ಕಲ್ಮಶದಲ್ಲಿ ನಿಟ್ಟುಸಿರು ಬಿಡುತ್ತಾ ದಿನ ದೂಡುತ್ತಿದ್ದಾರೆ.

ಆದರೆ ವಿಚಿತ್ರ ಸಂಗತಿಯೇನೆಂದರೆ ಮುಸಲ್ಮಾನರಲ್ಲಿ ಕೆಲವರು ಈ ಚಿಕಿತ್ಸೆಯನ್ನು ಸ್ವೀಕರಿಸಿ ಇತರರಿಗೂ ಈ ಚಿಕಿತ್ಸೆಯನ್ನು ಶಿಫಾರಸು ಮಾಡುವಾಗ ಬಹುಪಾಲು ಮುಸಲ್ಮಾನರು ಇವರು ಹೇಳುವ ಈ ಚಿಕಿತ್ಸೆಯನ್ನು ಸ್ವೀಕರಿಸುವುದು ಬಿಟ್ಟು ಇವರನ್ನೇ ಬೆದರಿಸುತ್ತಾರೆ. ಇವರನ್ನು ದ್ವೇಷಿಸುತ್ತಾರೆ. ಮುಸಲ್ಮಾನರನ್ನು ಈ ಹೀನಾಯ ಸ್ಥಿತಿಗೆ ತಳ್ಳಿದ ಶಿರ್ಕ್, ಬಿದ್‌ಅತ್, ಖುರಾಫಾತ್‌ಗಳ ವಿರುದ್ಧ ಹೋರಾಡುತ್ತಾ ಮುಸಲ್ಮಾನರನ್ನು ಕುರ್‌ಆನ್ ಮತ್ತು ಸುನ್ನತ್ತಿನೆಡೆಗೆ ಕರೆಯುವುದನ್ನು ಇವರು ತೀವ್ರವಾಗಿ ವಿರೋಧಿಸುತ್ತಾರೆ. ಅವರ ವಿರುದ್ಧ ಕಠಿಣವಾಗಿ ಹೋರಾಡುತ್ತಾರೆ. ಸುಧಾರಣಾವಾದಿಗಳೆಂಬ ಮುಖವಾಡ ಹಾಕಿದವರು, ಸಮುದಾಯದ ನಾಯಕರೆಂದು ಬಿಂಬಿಸಿಕೊಳ್ಳುವವರು ಮುಂತಾದವರು ಅವರ ವಿರುದ್ಧ ಆಕ್ಷೇಪದ ಮಾತುಗಳನ್ನು ಹೇಳುತ್ತಾ ಅವರನ್ನು ಬಹಿಷ್ಕರಿಸುವಂತೆ ಕರೆ ನೀಡುತ್ತಾರೆ.

ಓ ಮುಸ್ಲಿಮ್ ಸಮುದಾಯವೇ! ಎಲ್ಲಿದೆ ಸರಿಯಾದ ತೌಹೀದ್? ಎಲ್ಲಿದೆ ಸರಿಯಾದ ವಿಶ್ವಾಸ? ಎಲ್ಲಿದೆ ಸರಿಯಾದ ಮನ್‌ಹಜ್? ಇವೆಲ್ಲವೂ ಮುಸಲ್ಮಾನರನ್ನು ಒಟ್ಟುಗೂಡಿಸುವ ವಿಷಯಗಳಾಗಿವೆ. ಮುಸಲ್ಮಾನರು ಒಂದೇ ಒಂದು ವಿಶ್ವಾಸದ ನೆರಳಲ್ಲಿ, ಒಂದೇ ಒಂದು ಮನ್‌ಹಜ್‌ನ ನೆರಳಲ್ಲಿ ಒಟ್ಟುಗೂಡಬೇಕು. ಈ ವಿಶ್ವಾಸ ಮತ್ತು ಮನ್‌ಹಜ್ ಕುರ್‌ಆನ್ ಮತ್ತು ಸುನ್ನತ್ತಿನ ಆಧಾರದಲ್ಲಿ ಸಲಫು ಸ್ವಾಲಿಹೀನರ ಜೀವನದ ಆಧಾರದಲ್ಲಿರಬೇಕು. ಅವರೆಲ್ಲರೂ ಅಲ್ಲಾಹನಲ್ಲಿ, ಅವರ ರಸೂಲರಲ್ಲಿ, ಈಮಾನ್ ಮತ್ತು ಇಸ್ಲಾಮಿನ ಎಲ್ಲಾ ಶಾಖೆಗಳಲ್ಲಿ ಸರಿಯಾದ ವಿಶ್ವಾಸವನ್ನಿಟ್ಟು ಅದನ್ನು ತಮ್ಮ ಜೀವನದಲ್ಲಿ ವಸ್ತುನಿಷ್ಠವಾಗಿ ಅಳವಡಿಸಿಕೊಂಡಿದ್ದರು. ಈ ಸಮುದಾಯದ ಮೊದಲಿನವರು ಯಾವುದರಿಂದ ಸುಧಾರಣೆಯಾದರೋ ಅದರಿಂದಲ್ಲದೆ ಈ ಸಮುದಾಯದ ಕೊನೆಯವರು ಖಂಡಿತ ಸುಧಾರಣೆಯಾಗಲಾರರು.

ಮುಸಲ್ಮಾನರು ಈ ಸುಧಾರಣೆಯನ್ನು ಕುರ್‌ಆನ್ ಮತ್ತು ಸುನ್ನತ್ತಿನಲ್ಲಿ ಹುಡುಕುವುದನ್ನು ಬಿಟ್ಟು ಅಲ್ಲಿ ಇಲ್ಲಿ ಹುಡುಕುತ್ತಿದ್ದಾರೆ. ಸುಧಾರಣೆಯನ್ನು ಪ್ರಜಾಪ್ರಭುತ್ವದಲ್ಲಿ ಹುಡುಕುತ್ತಿದ್ದಾರೆ. ಈಗ ಅವರ ಪ್ರಕಾರ ಸರ್ವರೋಗ ಪರಿಹಾರ ಪ್ರಜಾಪ್ರಭುತ್ವದಲ್ಲಿದೆ. ಪ್ರಜಾಪ್ರಭುತ್ವವೇ ಈ ಎಲ್ಲಾ ಸಮಸ್ಯೆಗಳಿಗೆ ಪರಿಹಾರವೆಂದು ಅವರು ಹೇಳುತ್ತಿದ್ದಾರೆ. ಅಂದರೆ ಶಿಯಾಗಳು, ಬಾತಿನೀಗಳು, ಓರಿಯಂಟಲಿಸ್ಟ್‌ಗಳು, ಯಹೂದಿ–ಕ್ರೈಸ್ತರು ಎಲ್ಲರೂ ಒಟ್ಟುಗೂಡಿ ಒಂದೇ ಸೂರಿನೊಳಗೆ ಸೇರಿ ಪ್ರಜಾಪ್ರಭುತ್ವ ನಡೆಸುವುದೇ ಸರಿಯಾದ ಪರಿಹಾರ!

ಈ ಪ್ರಜಾಪ್ರಭುತ್ವ ಎನ್ನುವುದು ಯೂರೋಪ್‌ನಿಂದ ಬಂದ ಸುಧಾರಣೆ! ಇದು ಅಮೇರಿಕಾದಿಂದ ಬಂದ ಸುಧಾರಣೆ! ಬುಶ್ ಮತ್ತು ಶರೋನ್ ಹೇಳುವ ಸುಧಾರಣೆ! ಈ ಸುಧಾರಣೆಯನ್ನು ಬಡಪಾಯಿ ಮುಸಲ್ಮಾನರು ಚಿಕಿತ್ಸೆಯೆಂದು ತಿಳಿದಿದ್ದಾರೆ. ಆದರೆ ಪ್ರವಾದಿಯವರು(ﷺ) ಹೇಳುವುದನ್ನು ನೋಡಿರಿ:

«يُوشِكُ الْأُمَمُ أَنْ تَدَاعَى عَلَيْكُمْ كَمَا تَدَاعَى الْأَكَلَةُ إِلَى قَصْعَتِهَا.» فَقَالَ قَائِلٌ: وَمِنْ قِلَّةٍ نَحْنُ يَوْمَئِذٍ؟ قَالَ: «بَلْ أَنْتُمْ يَوْمَئِذٍ كَثِيرٌ. وَلَكِنَّكُمْ غُثَاءٌ كَغُثَاءِ السَّيْلِ. وَلَيَنْزَعَنَّ اللَّهُ مِنْ صُدُورِ عَدُوِّكُمْ الْمَهَابَةَ مِنْكُمْ. وَلَيَقْذِفَنَّ اللَّهُ فِي قُلُوبِكُمْ الْوَهْنَ». فَقَالَ قَائِلٌ: يَا رَسُولَ اللَّهِ! وَمَا الْوَهْنُ؟ قَالَ: «حُبُّ الدُّنْيَا وَكَرَاهِيَةُ الْمَوْتِ».

"ಹಸಿದವರು ಆಹಾರದ ಬಟ್ಟಲಿಗೆ ಮುಗಿಬೀಳುವಂತೆ ಶತ್ರುಗಳು ನಿಮ್ಮ ಮೇಲೆ ಮುಗಿಬೀಳುವರು" ಎಂದು ಪ್ರವಾದಿಯವರು

(ﷺ) ಹೇಳಿದಾಗ, ಒಬ್ಬರು ಕೇಳಿದರು: "ಓ ಅಲ್ಲಾಹನ ಸಂದೇಶವಾಹಕರೇ! ಅಂದು ನಾವು ಅಲ್ಪ ಸಂಖ್ಯೆಯಲ್ಲಿರುವೆವೇ?" ಪ್ರವಾದಿಯವರು(ﷺ) ಹೇಳಿದರು: "ಇಲ್ಲ. ಅಂದು ನೀವು ಅಧಿಕ ಸಂಖ್ಯೆಯಲ್ಲಿರುವಿರಿ. ಆದರೆ ನೀವು ಪ್ರವಾಹದಲ್ಲಿ ಕೊಚ್ಚಿ ಹೋಗುವ ಕಸಕಡ್ಡಿಗಳಂತಿರುವಿರಿ. ಅಲ್ಲಾಹು ನಿಮ್ಮ ಶತ್ರುಗಳ ಹೃದಯದಿಂದ ನಿಮ್ಮ ಬಗ್ಗೆಯಿರುವ ಭಯವನ್ನು ತೆಗೆದುಬಿಡುವನು. ನಿಮ್ಮ ಹೃದಯದಲ್ಲಿ ವಹ್ನ್ ಹಾಕಿ ಬಿಡುವನು." ಆಗ ಒಬ್ಬರು ಕೇಳಿದರು: "ಓ ಅಲ್ಲಾಹನ ಸಂದೇಶವಾಹಕರೇ! ವಹ್ನ್ ಎಂದರೇನು?" ಪ್ರವಾದಿಯವರು(ﷺ) ಹೇಳಿದರು: "ಇಹಲೋಕ ಜೀವನದ ಬಗ್ಗೆ ಪ್ರೀತಿ ಮತ್ತು ಮರಣದ ಬಗ್ಗೆ ದ್ವೇಷ."

ಶತ್ರುಗಳ ಹೃದಯದಿಂದ ಮುಸಲ್ಮಾನರ ಬಗ್ಗೆಯಿರುವ ಭಯವನ್ನು ತೆಗೆದು ಹಾಕಲಾಗಿದೆ. ಮುಸಲ್ಮಾನರ ಹೃದಯಲ್ಲಿ ವಹ್ನ್ ಹಾಕಿಬಿಡಲಾಗಿದೆ. ಇದರಿಂದಾಗಿ ಅವರು ಕಸಕಡ್ಡಿಗಳಾಗಿ ಮಾರ್ಪಟ್ಟಿದ್ದಾರೆ. ಅದರಿಂದ ಹೊರಬರಲು ಅವರು ಇಚ್ಛಿಸುವುದೂ ಇಲ್ಲ. ದುರದೃಷ್ಟವಶಾತ್, ಅನೇಕ ಉಲಮಾಗಳು ಮತ್ತು ವೈದ್ಯರು ಸುಧಾರಣೆಯನ್ನು ಬಯಸುತ್ತಾರೆ. ಆದರೆ ಅವರು ಬಯಸುವ ಸುಧಾರಣೆ ವಿವಿಧ ಧರ್ಮೀಯರೊಂದಿಗೆ ಮಾತುಕತೆ, ಧಾರ್ಮಿಕ ಸೌಹಾರ್ದ, ಎಲ್ಲ ಧರ್ಮಗಳೂ ಸಮಾನ ಮತ್ತು ಪವಿತ್ರವೆನ್ನುವ ಭಾವನೆ ಇತ್ಯಾದಿಗಳಾಗಿವೆ. ಇಲ್ಲಿ ಪ್ರವಾದಿಯವರನ್ನು(ﷺ) ನಿಂದಿಸಲಾಗುತ್ತಿದೆ. ಆದರೆ ನಾವು, ನಮಗೆ ಚಿಕಿತ್ಸೆ ನೀಡಿರಿ. ನಮಗೆ ಸುರಕ್ಷತೆ ನೀಡಿರಿ. ಓ ವಿಶ್ವಸಂಸ್ಥೆಯವರೇ! ನಮ್ಮನ್ನು ರಕ್ಷಿಸಿರಿ. ನಮ್ಮ ಧರ್ಮವನ್ನು, ನಮ್ಮ ರಸೂಲರನ್ನು ಇತರ ಧರ್ಮಗಳೊಂದಿಗೆ ಸೇರಿಸಿರಿ ಎಂದು ಹೇಳುತ್ತಿದ್ದೇವೆ.

ಇಂದು ಮುಸಲ್ಮಾನರು ಇರಾಕಿನಲ್ಲಿ ಕೊಲೆಯಾಗುತ್ತಿದ್ದಾರೆ. ಅವರ ಪರವಾಗಿ ಧ್ವನಿಯೆತ್ತಲು ಯಾರೂ ಇಲ್ಲ. ಇರಾಕಿನಲ್ಲಿ ಅಹ್ಲುಸ್ಸುನ್ನದ ಜನರನ್ನು ಭೀಕರವಾಗಿ ಹತ್ಯೆ ಮಾಡಲಾಗುತ್ತಿದೆ. ಆದರೂ ಯಾರೂ ತುಟಿ ಬಿಚ್ಚುವುದಿಲ್ಲ. ಮಸೀದಿಗಳನ್ನು ಉರುಳಿಸಲಾಗುತ್ತಿದೆ. ಮುಸ್‌ಹಫ್‌ಗಳನ್ನು ತುಳಿಯಲಾಗುತ್ತಿದೆ. ಯಾರೂ ಮಾತನಾಡುವುದಿಲ್ಲ. ಹೇಗೆ ಮಾತನಾಡುತ್ತಾರೆ? ಮುಸಲ್ಮಾನರು ಇಂದು ಕಸಕಡ್ಡಿಗಳಂತೆ ಆಗಿಬಿಟ್ಟಿದ್ದಾರೆ.

ಅಲ್ಲಾಹನ ಹಗ್ಗವನ್ನು ಬಿಗಿಯಾಗಿ ಹಿಡಿದುಕೊಳ್ಳುವುದು ಕಡ್ಡಾಯವಾಗಿದೆ. ಅಲ್ಲಾಹನ ಗ್ರಂಥವನ್ನು ಅನುಸರಿಸಿ, ಅಲ್ಲಾಹನ ಆಜ್ಞೆಗಳನ್ನು ಪಾಲಿಸಿ ಜೀವಿಸಬೇಕಾದುದು ಕಡ್ಡಾಯವಾಗಿದೆ. ಅಲ್ಲಾಹನ ಕರೆಗೆ ಸ್ಪಂದಿಸುವುದು ಕಡ್ಡಾಯವಾಗಿದೆ. ನಾವು ಆಂತರಿಕವಾಗಿಯೂ ಬಾಹ್ಯವಾಗಿಯೂ ನೈಜ ಮುಸಲ್ಮಾನರಾಗುವುದು ಕಡ್ಡಾಯವಾಗಿದೆ. ಈ ಧರ್ಮವನ್ನು ಆದಿಯಿಂದ ಅಂತ್ಯದ ತನಕ ನಮ್ಮ ಜೀವನದಲ್ಲಿ ಅಳವಡಿಸಬೇಕಾದುದು ಕಡ್ಡಾಯವಾಗಿದೆ.

ಸಹಾಬಾಗಳು ನಿಂದ್ಯತೆಯಲ್ಲೂ ಅವಮಾನದಲ್ಲೂ ಜೀವಿಸುತ್ತಿದ್ದರು. ಆದರೆ ಅವರು ಅಲ್ಲಾಹನ ಗ್ರಂಥದೊಂದಿಗೆ ಮತ್ತು ಪ್ರವಾದಿಯವರ(ﷺ) ಸುನ್ನತ್ತಿನೊಂದಿಗೆ ನಿಷ್ಕಳಂಕತೆ, ಸತ್ಯಸಂಧತೆ ತೋರಿಸಿ ಅವುಗಳನ್ನು ಬಿಗಿಯಾಗಿ ಹಿಡಿದುಕೊಂಡಾಗ ಅವರಿಗೆ ಅಲ್ಲಾಹನ ಸಹಾಯ ದೊರಕಿತು. ಅವರು ಆ ಕಾಲಘಟ್ಟದ ಅತಿ ಬಲಿಷ್ಠ ಶಕ್ತಿಯಾಗಿ ಮಾರ್ಪಟ್ಟರು. ಅವರು ಸಂಖ್ಯೆಯಲ್ಲಿ ಕಡಿಮೆಯಾಗಿದ್ದರು. ಅಲ್ಲಾಹು ಅವರನ್ನು ಅಲ್ಲಾಹನ ಗ್ರಂಥ ಮತ್ತು ಪ್ರವಾದಿಯವರ(ﷺ) ಸುನ್ನತ್ತಿನ ಆಧಾರದಲ್ಲಿ ಒಟ್ಟುಗೂಡಿಸಿದನು.

ನಾನು ಮದೀನಾದಲ್ಲಿ ಪ್ರವಾದಿಯವರ(ﷺ) ಮಸೀದಿಯಲ್ಲಿ ಕುಳಿತು ಪ್ರವಾದಿಯವರ(ﷺ) ಈ ವಚನದ ಬಗ್ಗೆ ಚಿಂತಿಸುತ್ತಿದ್ದೆ.

«إِنَّ الْمَدِينَةَ قَرْيَةٌ تَأْكُلُ الْقُرَى».

"ಮದೀನಾ ಇತರ ಪಟ್ಟಣಗಳನ್ನು ತಿನ್ನುವ ಒಂದು ಪಟ್ಟಣವಾಗಿದೆ."

ಮದೀನಾ ಇತರ ಪಟ್ಟಣಗಳನ್ನು ತಿನ್ನುವುದೇ? ಹೇಗೆ? ಮದೀನಾ ಜಗತ್ತಿನ ಪಟ್ಟಣಗಳನ್ನು ಜಯಿಸಿತ್ತು. ಅಂದಿನ ಮದೀನಾ ಮಸೀದಿ ಇಂದಿನ ಮದೀನಾ ಮಸೀದಿಯ ಐವತ್ತನೇ ಒಂದು ಭಾಗದಷ್ಟೂ ದೊಡ್ಡದಿರಲಿಲ್ಲ. ಇಂದಿನ ಮದೀನಾ ಮಸೀದಿಯನ್ನು ನೋಡಿ. ಬಹಳ ವಿಶಾಲವಾಗಿದೆ. ಇಂದಿನ ಮಸೀದಿ ಜನರಿಂದ ತುಂಬಿ ತುಳುಕುತ್ತಿದೆ. ಆದರೆ ಅವರೆಲ್ಲ ಕಸಕಡ್ಡಿಗಳು!

ಆ ಕಾಲದಲ್ಲಿ ಪ್ರವಾದಿಯವರ(ﷺ) ಮಸೀದಿ ಬಹಳ ಚಿಕ್ಕದಾಗಿತ್ತು. ಇಂದಿನ ಮಸೀದಿಯ ಐವತ್ತನೇ ಒಂದು ಭಾಗದಷ್ಟೂ ಇರಲಿಲ್ಲ. ಆದರೂ ಅಲ್ಲಿನ ಜನರಿಗೆ ಅಲ್ಲಾಹು ವಿಶ್ವವನ್ನೇ ಗೆಲ್ಲಿಸಿ ಕೊಟ್ಟನು. ಇದು ಅವರ ಈಮಾನ್, ಇಖ್ಲಾಸ್, ತವಕ್ಕುಲ್‌ನ ಪರಿಣಾಮವಾಗಿತ್ತು. ಅವರು ಜಗತ್ತನ್ನು ಗೆದ್ದದ್ದು ಅವರ ಶಕ್ತಿಯಿಂದಾಗಿರಲಿಲ್ಲ. ಬದಲಾಗಿ ಅಲ್ಲಾಹನ ಸಹಾಯದಿಂದ.

﴿وَمَا النَّصْرُ إِلَّا مِنْ عِندِ اللَّهِ الْعَزِيزِ الْحَكِيمِ ﴿١٢٦﴾﴾

"ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆದ ಅಲ್ಲಾಹನಿಂದಲ್ಲದೆ ಸಹಾಯವು ಬರುವುದಿಲ್ಲ." (3:126)

ಓ ಮುಸ್ಲಿಂ ಸಮುದಾಯವೇ! ಕುರ್‌ಆನ್ ಬೋಧಿಸುವ, ಪ್ರವಾದಿಗಳೆಲ್ಲರೂ ಬೋಧಿಸಿದ ತೌಹೀದನ್ನು ಬಿಗಿಯಾಗಿ ಹಿಡಿಯಿರಿ. ಮುಸ್ಲಿಂ ದೇಶಗಳಲ್ಲಿ ಗೋರಿಗಳು, ಬಿದ್‌ಅತ್‌ಗಳು, ಖುರಾಫಾತ್‌ಗಳು ತುಂಬಿ ತುಳುಕುತ್ತಿವೆ. ಅವರಿಗೆ ಅಲ್ಲಾಹನ ಸಹಾಯ ಸಿಗುವುದಾದರೂ ಹೇಗೆ? ಅವರಿಗೆ ಗೌರವ ಸಿಗುವುದಾದರೂ ಹೇಗೆ? ಅವರು ತಟ್ಟುತ್ತಿರುವುದು ಅಪಮಾನದ, ನಿಂದ್ಯತೆಯ ಬಾಗಿಲುಗಳನ್ನಾಗಿದೆಯೇ ಹೊರತು –ಅಲ್ಲಾಹು ಕಾಪಾಡಲಿ– ಗೌರವದ, ಸೌಭಾಗ್ಯದ ಬಾಗಿಲುಗಳನ್ನಲ್ಲ.




“ನೀವೆಲ್ಲರೂ ಅಲ್ಲಾಹನ ಹಗ್ಗವನ್ನು ಬಿಗಿಯಾಗಿ ಹಿಡಿದುಕೊಳ್ಳಿರಿ. ಭಿನ್ನರಾಗಬೇಡಿ.” (3:103)

ನೀವೆಲ್ಲರೂ ಅಲ್ಲಾಹನ ಹಗ್ಗವನ್ನು ಬಿಗಿಯಾಗಿ ಹಿಡಿದುಕೊಳ್ಳಿರಿ. ಅಲ್ಲಾಹನ ಹಗ್ಗ ಎಂದರೇನು? ಅಲ್ಲಾಹನ ಹಗ್ಗ ಎಂದರೆ ಅಲ್ಲಾಹನ ಗ್ರಂಥ ಮತ್ತು ಪ್ರವಾದಿಯವರ(ﷺ) ಸುನ್ನತ್. ಅಲ್ಲಾಹು ಸಂಪೂರ್ಣ ಮುಸ್ಲಿಂ ಸಮುದಾಯಕ್ಕೆ ಈ ಹಗ್ಗವನ್ನು ಬಿಗಿಯಾಗಿ ಹಿಡಿದುಕೊಳ್ಳಲು ಆದೇಶಿಸಿದ್ದಾನೆ. ಆದರೆ ಈ ಸಮುದಾಯ ಈ ಹಗ್ಗವನ್ನು ಬಿಗಿಯಾಗಿ ಹಿಡಿದುಕೊಂಡಿದೆಯೇ? ಮುಸ್ಲಿಂ ಸಮುದಾಯ ವಿಶ್ವಾಸ, ಆರಾಧನೆ, ಮನ್‌ಹಜ್ ಇತ್ಯಾದಿಗಳಲ್ಲಿ ಅಲ್ಲಾಹನ ಹಗ್ಗವನ್ನು ಬಿಗಿಯಾಗಿ ಹಿಡಿದುಕೊಂಡಿದೆಯೇ? ಇಲ್ಲ. ಅಲ್ಲಾಹನ ಮೇಲಾಣೆ! ಕೆಲವೇ ಜನರ ಹೊರತು ಯಾರೂ ಹಿಡಿದುಕೊಂಡಿಲ್ಲ. ಈ ಸಲಫೀ ಮನ್‌ಹಜ್‌ನೆಡೆಗೆ, ಕುರ್‌ಆನ್ ಮತ್ತು ಸುನ್ನತ್ತಿನೆಡೆಗೆ ಕರೆಯುವ ಕೆಲವೇ ಜನರ ಹೊರತು ಇನ್ನಾರೂ ಹಿಡಿದುಕೊಂಡಿಲ್ಲ. ಅಲ್ಲಾಹನಾಣೆ! ಉಳಿದವರೆಲ್ಲರೂ ಈ ಮನ್‌ಹಜನ್ನು ದ್ವೇಷಿಸುವವರೇ ಆಗಿದ್ದಾರೆ. ಈ ಮನ್‌ಹಜ್‌ನ ವಿರುದ್ಧ ಹೋರಾಡುವವರೇ ಆಗಿದ್ದಾರೆ. ಈ ದಅ್‌ವತ್ತನ್ನು ವಿರೋಧಿಸುವವರೇ ಆಗಿದ್ದಾರೆ.

ಸಹೋದರರರೇ! ನನಗೆ ಗೊತ್ತಿದೆ. ಆದರೆ ನಿಮಗೆ ಗೊತ್ತಿಲ್ಲ. ನಾವು ಈ ನಾಡಿನಲ್ಲಿ ವಿದ್ಯಾರ್ಥಿಗಳಾಗಿದ್ದೆವು. ನಾವು ಸೌದಿ ಅರೇಬಿಯಾದ ದಕ್ಷಿಣದಿಂದ ಉತ್ತರಕ್ಕೆ, ಪೂರ್ವದಿಂದ ಪಶ್ಚಿಮಕ್ಕೆ ಪ್ರಯಾಣಿಸುತ್ತಿದ್ದೆವು. ನಾವು ಪ್ರಯಾಣ ಮಾಡಿದ ಕಡೆಯಲ್ಲೆಲ್ಲಾ ನಮಗೆ ನಮ್ಮದೇ ಸಹೋದರರು, ನಮ್ಮದೇ ಅಕೀದದಲ್ಲಿರುವ, ನಮ್ಮದೇ ಮನ್‌ಹಜ್‌ನಲ್ಲಿರುವ ಉಲಮಾಗಳು ಮತ್ತು ವಿದ್ಯಾರ್ಥಿಗಳು ಸಿಗುತ್ತಿದ್ದರು. ನಾನು ಮದೀನಾ ಮುನವ್ವರದ ಜಾಮಿಯ ಇಸ್ಲಾಮಿಯ್ಯದಲ್ಲಿ ವಿದ್ಯಾರ್ಥಿಯಾಗಿದ್ದೆ. ಅಲ್ಲಿ ಪ್ರಾಧ್ಯಾಪಕನೂ ಆಗಿದ್ದೆ. ನನ್ನ ವಿದ್ಯಾಭ್ಯಾಸವನ್ನು ಪೂರ್ಣಗೊಳಿಸಲು ನಾನು ಮಕ್ಕಾ ಮುಕರ್ರಮದಲ್ಲಿ ತಂಗಿದ್ದೆ. ಅಲ್ಲಿ ಸಲಫೀಗಳು, ಅಹ್ಲೆ ಹದೀಸಿನವರು ನಮ್ಮನ್ನು ಭೇಟಿಯಾಗುತ್ತಿದ್ದರು. ಎಲ್ಲರೂ ಒಂದೇ ಹೃದಯವನ್ನು ಹೊಂದಿದವರಾಗಿದ್ದರು. ಮನ್‌ಹಜ್‌ನ ವಿಷಯದಲ್ಲಿ ಅವರ ನಡುವೆ ಯಾವುದೇ ಭಿನ್ನಮತವಿರಲಿಲ್ಲ. ಮಾತ್ರವಲ್ಲ, ಯಾವುದೇ ವಿಷಯದಲ್ಲೂ ಭಿನ್ನಮತವಿರಲಿಲ್ಲ. ಕೆಲವೊಂದು ಆಂಶಿಕ ವಿಷಯಗಳ ಹೊರತು. ಅಂತಹ ಭಿನ್ನಮತ ಸಹಾಬಿಗಳಲ್ಲೂ ಇತ್ತು. ಆದರೆ ಮನ್‌ಹಜ್, ಅಕೀದ ಮಾತ್ರವಲ್ಲ ರಾಜಕೀಯವಾಗಿಯೂ ಅವರಲ್ಲಿ ಯಾವುದೇ ಭಿನ್ನಮತವಿರಲಿಲ್ಲ. ಅವರೆಲ್ಲರೂ ಒಂದೇ ಮನ್‌ಹಜ್‌ನಲ್ಲಿದ್ದರು.

ಆದರೆ ನಂತರ ಶೈತಾನನು ಅವರ ಮಧ್ಯೆ ಭಿನ್ನಮತ ಮೂಡಿಸಿದನು. ಫಿತ್ನದ ಜನರು ಬಂದು ವಿಷವನ್ನು ಕಾರಿದರು. ಜನರಲ್ಲಿ ಗುಂಪುಗಾರಿಕೆ ಆರಂಭವಾಯಿತು. ಹೃದಯಗಳು ಒಡೆಯತೊಡಗಿದವು. ಪೂರ್ವದಲ್ಲೂ ಪಶ್ಚಿಮದಲ್ಲೂ ಜನರು ಭಿನ್ನರಾದರು. ಅಲ್ಲಾಹನ ಗ್ರಂಥ ಮತ್ತು ಪ್ರವಾದಿಯವರ(ﷺ) ಸುನ್ನತ್ತನ್ನು ಬಿಗಿಯಾಗಿ ಹಿಡಿದು ಒಂದೇ ಆತ್ಮವಾಗಿದ್ದ ಮುಸ್ಲಿಂ ಸಮುದಾಯ ಇಂದು ಹಲವು ಪಂಗಡಗಳಾಗಿ ಹರಿದಿದೆ. ಯುವಕರು ಅನೇಕ ಗುಂಪುಗಳಲ್ಲಿ ಹಂಚಿ ಹೋಗಿದ್ದಾರೆ. ಅವರ ನಡುವೆ ಸಾಹೋದರ್ಯವಿಲ್ಲ. ಅವರ ನಡುವೆ ಪ್ರೀತಿಯಿಲ್ಲ. ಅಲ್ಲಾಹನ ಗ್ರಂಥದ ಪ್ರಕಾರ, ಪ್ರವಾದಿಯವರ(ﷺ) ಸುನ್ನತ್ತಿನ ಪ್ರಕಾರ ತಮ್ಮ ಭಿನ್ನಾಭಿಪ್ರಾಯಗಳನ್ನು ಬಗೆಹರಿಸಲು ಅವರು ಸಿದ್ಧರಿಲ್ಲ. ಪ್ರತಿಯೊಬ್ಬರೂ ಅವರವರ ಇಷ್ಟದ ಪ್ರಕಾರ ನಡೆಯುತ್ತಿದ್ದಾರೆ. ಅದನ್ನು ಬದಲಾಯಿಸಿಕೊಳ್ಳಲು ಅವರು ಸಿದ್ಧರಿಲ್ಲ. ತಾನು ಪ್ರಮಾದದಲ್ಲಿದ್ದೇನೆಂಬ ಭಾವನೆಯೇ ಅವರಲ್ಲಿಲ್ಲ.

ಸಹೋದರರರೇ! ಸಹೀಹುಲ್ ಬುಖಾರಿಯಲ್ಲಿ ಇಬ್ನ್ ಅಬ್ಬಾಸ್(رضي الله عنه) ವರದಿ ಮಾಡಿದ ಒಂದು ಘಟನೆಯಿದೆ. ಒಮ್ಮೆ ಉಯಯ್ನ ಇಬ್ನ್ ಹಿಸ್ನ್ ಇಬ್ನ್ ಹುಝೈಫ ಎಂಬವರು ಹುರ್ರ್ ಇಬ್ನ್ ಕೈಸ್(رضي الله عنه) ರವರ ಬಳಿ ಬಂದು ತಂಗಿದರು. ಹುರ್ರ್ ಉಯಯ್ನರವರ ಸೋದರ ಪುತ್ರರಾಗಿದ್ದರು. ಅವರಿಗೆ ಉಮರ್(رضي الله عنه) ರವರ ಬಳಿ ಸ್ಥಾನಮಾನವಿತ್ತು. ಉಮರ್(رضي الله عنه) ರವರು ಸಮಾಲೋಚನೆ ಮಾಡುತ್ತಿದ್ದ ಉಲಮಾಗಳ ಸಾಲಿನಲ್ಲಿ ಇವರೂ ಸೇರಿದ್ದರು. ಹೀಗಿರುವಾಗ ಒಮ್ಮೆ ಉಯಯ್ನ ಹೇಳಿದರು: ನಿಮಗೆ ಅಮೀರರ ಬಳಿ ಸ್ಥಾನಮಾನವಿದೆಯಲ್ಲವೇ? ಒಮ್ಮೆ ನನಗೂ ಅವರನ್ನು ಭೇಟಿ ಮಾಡಿಸಿಕೊಡಿ. ಹುರ್ರ್ ಒಪ್ಪಿಕೊಂಡರು. ಹೀಗೆ ಒಂದಿನ ಅವರು ಉಯಯ್ನರಿಗೆ ಉಮರ್(رضي الله عنه) ರವರನ್ನು ಭೇಟಿ ಮಾಡಿಸಿದರು. ಉಮರ್(رضي الله عنه) ರನ್ನು ಕಂಡಾಗ ಉಯಯ್ನ ಹೇಳಿದರು: ಓ ಖತ್ತಾಬರ ಮಗನೇ! ಅಲ್ಲಾಹನ ಮೇಲಾಣೆ! ತಾವು ನಮಗೆ ಹೆಚ್ಚೇನೂ ಕೊಟ್ಟಿಲ್ಲ. ತಾವು ನ್ಯಾಯಯುತವಾಗಿ ಆಡಳಿತ ಮಾಡುತ್ತಿಲ್ಲ. ಇದನ್ನು ಕೇಳಿದಾಗ

ಉಮರ್(ﷺ) ರವರ ಕೋಪ ನೆತ್ತಿಗೇರಿತು. ಅವರು ಉಯಯ್ನರಿಗೆ ಥಳಿಸಲು ಮುಂದಾದಾಗ ಹುರ್ರ್ ಹೇಳಿದರು: ಓ ಅಮೀರುಲ್ ಮುಅ್‌ಮಿನೀನ್! ಇವನೊಬ್ಬ ಅವಿವೇಕಿ. ಅಲ್ಲಾಹು ಅವನ ಪ್ರವಾದಿಯೊಂದಿಗೆ(ﷺ) ಹೇಳುವುದನ್ನು ತಾವು ಕೇಳಿಲ್ಲವೇ?



“ಕ್ಷಮಿಸಿರಿ, ಸದಾಚಾರವನ್ನು ಆದೇಶಿಸಿರಿ ಮತ್ತು ಅವಿವೇಕಿಗಳಿಂದ ದೂರವಾಗಿರಿ.” (ಕುರ್‌ಆನ್ 7:199)

ಇದನ್ನು ಕೇಳಿದೊಡನೆ ಉಮರ್(ﷺ) ಅಲ್ಲೇ ನಿಂತುಬಿಟ್ಟರು. ಅವರ ಮುಖದಲ್ಲಿದ್ದ ಸಿಟ್ಟು ಮಾಯವಾಯಿತು. ಅಲ್ಲಾಹು ಆದೇಶಿಸಿದಂತೆ ಅವರು ಆ ವ್ಯಕ್ತಿಗೆ ಕ್ಷಮಿಸಿದರು. ಉಮರ್(ﷺ) ರವರು ಅಲ್ಲಾಹನ ಗ್ರಂಥದಲ್ಲಿ ಒಂದು ಆಜ್ಞೆಯನ್ನು ಕಂಡರೆ ಅಲ್ಲೇ ನಿಂತುಬಿಡುತ್ತಿದ್ದರು. ಅದನ್ನು ದಾಟಿ ಹೋಗುತ್ತಿರಲಿಲ್ಲ.

ಉಮರ್(ﷺ) ಮುಹದ್ದಿಸ್ ಆಗಿದ್ದರು, ಫಕೀಹ್ ಆಗಿದ್ದರು, ಇಮಾಮ್ ಆಗಿದ್ದರು. ಆದರೂ ಕೆಲವು ವಿಷಯಗಳಲ್ಲಿ ಅವರಿಗೆ ಪ್ರಮಾದ ಸಂಭವಿಸುತ್ತಿತ್ತು. ಆದರೆ ಆ ಪ್ರಮಾದವನ್ನು ತೋರಿಸಿದ ತಕ್ಷಣ ಅವರು ಸರಿಪಡಿಸಿಕೊಳ್ಳುತ್ತಿದ್ದರು. ಅಲ್ಲಾಹನ ಗ್ರಂಥದಲ್ಲಿ ಒಂದು ಆಜ್ಞೆಯನ್ನು ಕಂಡರೆ ಅಲ್ಲೇ ನಿಂತುಬಿಡುತ್ತಿದ್ದರು.

ಅವರ ಜೀವನದಲ್ಲಿ ಸಂಭವಿಸಿದ ಇನ್ನೊಂದು ಘಟನೆ ನೋಡಿ: ಅಬೂ ವಾಇಲ್ ಹೇಳುತ್ತಾರೆ: ನಾನು ಶೈಬಾ(ﷺ) ರವರ ಬಳಿಗೆ ಹೋಗಿ ಕುಳಿತೆ. ಕಅ್‌ಬಾದ ಕೀಲಿಕೈ ಅವರ ವಶದಲ್ಲಿತ್ತು. ಜಾಹಿಲೀ ಕಾಲದಲ್ಲೂ, ಇಸ್ಲಾಮಿನಲ್ಲೂ ಕಅ್‌ಬಾದ ಕೀಲಿಕೈ ಶೈಬಾ ವಂಶದವರ ಕೈಯಲ್ಲಿತ್ತು. ಪ್ರವಾದಿಯವರು(ﷺ) ಕಅ್‌ಬಾದ ಕೀಲಿಕೈಯನ್ನು ಅವರ ವಶಕ್ಕೆ ಕೊಟ್ಟಿದ್ದರು. ಅಬೂ ವಾಇಲ್ ಹೇಳುತ್ತಾರೆ: ನಾನು ಮಸ್ಜಿದುಲ್ ಹರಾಮ್‌ನಲ್ಲಿ ಶೈಬಾ(ﷺ) ರವರ ಬಳಿಗೆ ಹೋಗಿ ಕುಳಿತೆ. ಆಗ ಅವರು ಹೇಳಿದರು: ನೀವು ಕುಳಿತ ಇದೇ ಸ್ಥಳದಲ್ಲಿ ಉಮರ್ (ﷺ) ನನ್ನ ಬಳಿ ಕುಳಿತು ಹೀಗೆ ಹೇಳಿದರು: ಈ ಕಅ್‌ಬಾದಲ್ಲಿರುವ ಚಿನ್ನ–ಬೆಳ್ಳಿಗಳನ್ನೆಲ್ಲಾ ಬಡ ಮುಸಲ್ಮಾನರಿಗೆ ಹಂಚಬೇಕೆಂದು ಬಯಸುತ್ತೇನೆ. ಇದನ್ನು ಕೇಳಿದಾಗ ನಾನು ಹೇಳಿದೆ. ನೀವು ಹಾಗೆ ಮಾಡಬಾರದು. ಅವರು ಕೇಳಿದರು: ಏಕೆ? ನಾನು ಹೇಳಿದೆ: ನಿಮ್ಮ ಇಬ್ಬರು ಸಂಗಡಿಗರು (ಪ್ರವಾದಿಯವರು ಮತ್ತು ಅಬೂಬಕರ್) ಹಾಗೆ ಮಾಡಿಲ್ಲ. ಇದನ್ನು ಕೇಳಿ ಅವರು ಹೇಳಿದರು: ಹೌದು ನಾನು ಅನುಸರಿಸಬೇಕಾದುದು ಅವರಿಬ್ಬರನ್ನು.

ಉಮರ್(ﷺ) ತಮ್ಮ ಯೋಚನೆಯನ್ನು ಬಿಟ್ಟುಬಿಟ್ಟರು. ಇಂತಹ ಅನೇಕ ಉದಾಹರಣೆಗಳು ಸಹಾಬಾಗಳ ಚರಿತ್ರೆಗಳಲ್ಲಿವೆ. ಅವರು ಅಲ್ಲಾಹನ ಗ್ರಂಥದಲ್ಲಿ, ಪ್ರವಾದಿಯವರ(ﷺ) ಸುನ್ನತ್ತಿನಲ್ಲಿ ಒಂದು ಆಜ್ಞೆಯನ್ನು ಕಂಡರೆ ಅಲ್ಲೇ ನಿಂತುಬಿಡುತ್ತಿದ್ದರು. ಮತ್ತೆ ಅವರು ತಮ್ಮ ಅಭಿಪ್ರಾಯಕ್ಕೆ ಪ್ರಾಶಸ್ತ್ಯ ನೀಡುತ್ತಿರಲಿಲ್ಲ. ಆದರೆ ಇಂದು ನಮ್ಮ ಸ್ಥಿತಿಯೇನು? ನಾನು ಅಲ್ಲಾಹನ ಗ್ರಂಥದಲ್ಲಿ, ಪ್ರವಾದಿಯವರ(ﷺ) ಸುನ್ನತ್ತಿನಲ್ಲಿ ಒಂದು ಆಜ್ಞೆಯನ್ನು ಕಂಡರೆ ಅಲ್ಲೇ ನಿಂತುಬಿಡುತ್ತೇವೆಯೇ? ನಮ್ಮಲ್ಲಿ ಪ್ರತಿಯೊಬ್ಬರೂ ಅವರವರ ಮನಸ್ಸಿನೊಂದಿಗೆ ಕೇಳಬೇಕು: ಇಂತಿಂತಹ ವಿಷಯದಲ್ಲಿ ನಾನು ಸತ್ಯದಲ್ಲಿದ್ದೇನೆಯೇ? ಅಥವಾ ಪ್ರಮಾದದಲ್ಲಿದ್ದೇನೆಯೇ? ಅಲ್ಲಾಹನಿಗೆ ಸಂಪೂರ್ಣ ಶರಣಾಗಿ, ಅವನ ಗ್ರಂಥದಲ್ಲಿರುವಂತೆ, ಅವನ ಪ್ರವಾದಿಯ (ﷺ) ಸುನ್ನತ್ತಿನಲ್ಲಿರುವಂತೆ ನಮ್ಮ ಜೀವನವನ್ನು ಬದಲಾಯಿಸಿಕೊಳ್ಳುವ ತನಕ ನಾವು ಸತ್ಯದಲ್ಲಿರುವುದು ಸಾಧ್ಯವಿಲ್ಲ. ನಾವು ನಮ್ಮನ್ನು ಬದಲಾಯಿಸಿಕೊಂಡರೆ ನಮಗೆ ಅಲ್ಲಾಹನ ಗ್ರಂಥದಂತೆ ನಡೆದುಕೊಳ್ಳಲು ಸಾಧ್ಯ. ಸತ್ಯಕ್ಕೆ ಮರಳಲು ಸಾಧ್ಯ. ಆದರೆ ನಾವು ನಮ್ಮ ಇಷ್ಟಾನಿಷ್ಟಗಳನ್ನು ಹಿಂಬಾಲಿಸಿದರೆ, ನಮಗೆ ಸರಿ ಕಂಡಂತೆ ಜೀವಿಸಿದರೆ, ಅಲ್ಲಾಹನ ಗ್ರಂಥಕ್ಕೆ ಪ್ರವಾದಿಯವರ(ﷺ) ಸುನ್ನತ್ತಿಗೆ ನಮ್ಮ ಜೀವನದಲ್ಲಿ ಯಾವುದೇ ಬೆಲೆಯೂ ಇರಲಾರದು. ಅಸತ್ಯವು ನಮ್ಮ ಮೇಲೆ ಹತೋಟಿ ಸಾಧಿಸುವುದು.

ನಾನು ನನಗೂ, ನನ್ನ ವಿದ್ಯಾರ್ಥಿಗಳಿಗೂ, ನನ್ನ ಸಹೋದರರಿಗೂ, ನನ್ನ ಸಹಪಾಠಿಗಳಿಗೂ, ನನ್ನ ವಿರೋಧಿಗಳಿಗೂ ಈ ಸಮುದಾಯದ ವಿಷಯದಲ್ಲಿ, ನಮ್ಮ ಯುವಕರ ವಿಷಯದಲ್ಲಿ ಅಲ್ಲಾಹನನ್ನು ಭಯಪಟ್ಟು ಅಲ್ಲಾಹನ ಗ್ರಂಥದಂತೆ ಅವರನ್ನು ನಡೆಸಿಕೊಳ್ಳಲು, ಅಲ್ಲಾಹನ ಗ್ರಂಥದಂತೆ ಮತ್ತು ಪ್ರವಾದಿಯವರ(ﷺ) ಸುನ್ನತ್ತಿನಂತೆ ಅವರನ್ನು ಒಟ್ಟುಗೂಡಿಸಲು ಉಪದೇಶಿಸುತ್ತಿದ್ದೇನೆ. ನಾವು ನಮ್ಮ ಮಕ್ಕಳನ್ನು ನಮ್ಮ ಮಸೀದಿಗಳಲ್ಲಿ, ನಮ್ಮ ಮದ್ರಸಗಳಲ್ಲಿ, ನಮ್ಮ ಮನೆಗಳಲ್ಲಿ ಮೇಲೆ ಹೇಳಿದಂತೆ ಸರಿಯಾದ ಮನ್‌ಹಜ್‌ನಲ್ಲಿ ಬೆಳೆಸಬೇಕಾಗಿದೆ. ಇಷ್ಟಾನಿಷ್ಟಗಳಿಗೆ ದಾಸರಾಗದಂತೆ ಜಾಗರೂಕತೆ ವಹಿಸಬೇಕಾಗಿದೆ.

ಹೌದು! ಅಲ್ಲಾಹನಾಣೆ ಸತ್ಯ! ಇಂದು ಮುಸ್ಲಿಂ ಸಮುದಾಯ ಹರಿದು ಹಂಚಾಗಿ ಹೋಗಿದೆ. ಯುವಕರು ಗುಂಪುಗಾರಿಕೆಯಲ್ಲಿ ನಿರತರಾಗಿದ್ದಾರೆ. ಸಹಾಬಾಗಳೆಲ್ಲರೂ ಅಲ್ಲಾಹನ ಗ್ರಂಥದಲ್ಲಿ ಒಂದು ವಿಧಿಯನ್ನು ಕಂಡರೆ ಅಲ್ಲೇ ನಿಂತುಬಿಡುತ್ತಿದ್ದರು. ಸಲಫುಸ್ಸಾಲಿಹ್‌ಗಳು ಅಲ್ಲಾಹನ ಗ್ರಂಥದಲ್ಲಿ ಒಂದು ವಿಧಿಯನ್ನು ಕಂಡರೆ

ಅಲ್ಲೇ ನಿಂತುಬಿಡುತ್ತಿದ್ದರು. ಅವರ ಪೈಕಿ ಪ್ರಮಾದದಲ್ಲಿರುವವನನ್ನು ಎಚ್ಚರಿಸಿದರೆ ಆತ ಯಾವುದೇ ಹಿಂಜರಿಕೆಯಿಲ್ಲದೆ ಸತ್ಯವನ್ನು ಸ್ವೀಕರಿಸಿ ತೌಬಾ ಮಾಡುತ್ತಿದ್ದರು.

ಪ್ರವಾದಿಯವರ(ﷺ) ಕಾಲದಲ್ಲಿ ಯಾರಾದರೂ ವ್ಯಭಿಚಾರ ಮಾಡಿದರೆ ಅದರಲ್ಲೇ ಮುಂದುವರಿಯುತ್ತಿರಲಿಲ್ಲ. ಬದಲಾಗಿ ಪ್ರವಾದಿಯವರ(ﷺ) ಬಳಿಗೆ ಬಂದು ತನಗೆ ಶಿಕ್ಷೆ ಜಾರಿಗೊಳಿಸಬೇಕೆಂದು ಹೇಳುತ್ತಿದ್ದರು. ಪ್ರವಾದಿಯವರು(ﷺ) ಹೇಳುತ್ತಿದ್ದರು: ಬಹುಶ ಅದು ಇಂತಿಂತಹ ಕಾರಣದಿಂದಾಗಿರಬಹುದು... ಆದರೆ ಅವರು ತಪ್ಪು ಒಪ್ಪಿಕೊಳ್ಳುತ್ತಿದ್ದರು. ತಪ್ಪು ಮಾಡಿದ ಬಳಿಕ ಸುಖವಾಗಿ ಜೀವಿಸಲು ಅವರಿಗೆ ಕಷ್ಟವಾಗುತ್ತಿತ್ತು. ಕಾರಣ, ಅವರು ಬದುಕನ್ನು ದ್ವೇಷಿಸುತ್ತಿದ್ದರು. ಏಕೆ? ಏಕೆಂದರೆ ಅವರು ಅಲ್ಲಾಹನಿಗೆ ಸಂಪೂರ್ಣ ಶರಣಾಗಿದ್ದರು. ಅವರು ಪಾಪ ಸುರಕ್ಷಿತರಲ್ಲ. ಆದರೂ ಅವರು ತಪ್ಪು ಸಂಭವಿಸಿದರೆ ತಕ್ಷಣ ತಿದ್ದಿಕೊಳ್ಳುತ್ತಿದ್ದರು. ನಾವು ಕೂಡ ಪಾಪ ಸುರಕ್ಷಿತರಲ್ಲ. ನಾವೂ ತಪ್ಪು ಮಾಡುತ್ತೇವೆ. ಆದರೆ ನಾವು ನಮ್ಮ ತಪ್ಪನ್ನು ತಿದ್ದಿಕೊಳ್ಳುತ್ತೇವೆಯೇ?

﴿يَٰٓأَيُّهَا ٱلَّذِينَ ءَامَنُواْ تُوبُوٓاْ إِلَى ٱللَّهِ تَوۡبَةً نَّصُوحًا﴾

“ಓ ಸತ್ಯವಿಶ್ವಾಸಿಗಳೇ! ಅಲ್ಲಾಹನ ಕಡೆಗೆ ಪ್ರಾಮಾಣಿಕವಾಗಿ ಪಶ್ಚಾತ್ತಾಪಪಟ್ಟು ಮರಳಿರಿ.” (ಕುರ್‌ಆನ್ 66:8)

ನಮಗೆ ತಪ್ಪು ಸಂಭವಿಸುತ್ತದೆ. ಅಕೀದದಲ್ಲಿ, ಮನ್‌ಹಜ್‌ನಲ್ಲಿ, ಸ್ವಭಾವದಲ್ಲಿ, ಆರಾಧನೆಯಲ್ಲಿ ನಮಗೆ ತಪ್ಪು ಸಂಭವಿಸುತ್ತದೆ. ನಾವು ಪಾಪವೆಸಗುತ್ತೇವೆ. ನಿಷಿದ್ಧ ಕೃತ್ಯಗಳನ್ನು ಮಾಡುತ್ತೇವೆ. ಆದರೂ ತೌಬಾದ ಬಾಗಿಲು ನಮಗೆ ತೆರೆದುಕೊಂಡಿದೆ. ಆದರೆ ನಾವದನ್ನು ತಟ್ಟಲು ಸಿದ್ಧರಿಲ್ಲ.

ಪ್ರವಾದಿಗಳು ತಪ್ಪು ಮಾಡುತ್ತಿದ್ದರು. ನಂತರ ಅವರು ತೌಬಾ ಮಾಡುತ್ತಿದ್ದರು. ಆದಮ್(ؑ) ತಪ್ಪು ಮಾಡಿ ತೌಬಾ ಮಾಡಿದರೆಂದು ಅಲ್ಲಾಹು ಹೇಳಿದ್ದಾನೆ. ದಾವೂದ್(ؑ) ತಪ್ಪು ಮಾಡಿ ತೌಬಾ ಮಾಡಿದರೆಂದು ಅಲ್ಲಾಹು ಹೇಳಿದ್ದಾನೆ. ಮೂಸಾ(ؑ) ತಪ್ಪು ಮಾಡಿ ತೌಬಾ ಮಾಡಿದರೆಂದು ಅಲ್ಲಾಹು ಹೇಳಿದ್ದಾನೆ. ಇವರೆಲ್ಲರೂ ಅಲ್ಲಾಹನ ಮುಂದೆ ಕಳಂಕಿತರಾಗಿ ನಿಲ್ಲಲು ನಾಚಿಕೆಪಟ್ಟರು. ಎಲ್ಲಿಯವರೆಗೆಂದರೆ ಕಿಯಾಮತ್ ದಿನ ಈ ಪ್ರವಾದಿಗಳ ಬಳಿಗೆ ಶಫಾಅತ್‌ಗಾಗಿ ಹೋಗುವಾಗ, ಅವರು ತಾವು ಮಾಡಿದ ತಪ್ಪಿನ ಕಾರಣ ಅಲ್ಲಾಹನ ಮುಂದೆ ನಿಲ್ಲಲು ನಾಚಿಕೆಪಡುತ್ತಾರೆ. ಆದಮ್ (ؑ) ರಿಂದ ಶಫಾಅತ್ ಬೇಡುವಾಗ ಅವರು ಹೇಳುತ್ತಾರೆ: ನಾನು ತಪ್ಪು ಮಾಡಿದ್ದೇನೆ. ನನ್ನ ದೇಹ. ನನಗೆ ನನ್ನ ದೇಹದ ಚಿಂತೆ. ಅವರಿಗೆ ನಾಚಿಕೆಯಾಗುತ್ತದೆ. ಅವರು ಹೇಳುತ್ತಾರೆ: ನಾನು ಈ ತಪ್ಪಿನೊಂದಿಗೆ ಅಲ್ಲಾಹನ ಮುಂದೆ ನಿಲ್ಲಲು ನಾಚಿಕೆಪಡುತ್ತೇನೆ.

ನಂತರ ಜನರು ನೂಹ್(ؑ) ರವರ ಬಳಿಗೆ ಹೋಗುತ್ತಾರೆ. ಅವರು ಹೇಳುತ್ತಾರೆ: ನಾನು ತಪ್ಪು ಮಾಡಿದ್ದೇನೆ. ನೂಹ್(ؑ) ಮಾಡಿದ ತಪ್ಪು ಯಾವುದು? ಅವರ ಜನತೆಗೆ ವಿರುದ್ಧವಾಗಿ ಪ್ರಾರ್ಥಿಸಿದ್ದು. ಅವರು ಅದನ್ನು ತಪ್ಪೆಂದು ಭಾವಿಸಿದ್ದರು. ಅವರಿಗೆ ನಾಚಿಕೆಯಾಗುತ್ತದೆ. ಜನರು ಇಬ್ರಾಹೀಮ್(ؑ) ರವರ ಬಳಿಗೆ ಹೋಗುತ್ತಾರೆ. ಇಬ್ರಾಹೀಮ್(ؑ) ಹೇಳುತ್ತಾರೆ: ನಾನು ಕೂಡ ತಪ್ಪು ಮಾಡಿದ್ದೇನೆ. ಮೂಸಾ(ؑ) ಕೂಡ ಹಾಗೆಯೇ ಹೇಳುತ್ತಾರೆ.

ಸಹೋದರರೇ! ನಮ್ಮ ಸ್ಥಿತಿಯೇನು? ನಾವೆಲ್ಲಿದ್ದೇವೆ? ನಾವು ಅಸತ್ಯದಲ್ಲಿ ಜೀವಿಸುತ್ತಿದ್ದೇವೆ. ಅಸತ್ಯದಲ್ಲೇ ಹೊರಳುತ್ತಿದ್ದೇವೆ. ಅಲ್ಲಾಹನ (ﷻ) ಕಡೆಗೆ ನಾವು ಮರಳುವುದಿಲ್ಲ. ಬಹುಶಃ ನಮ್ಮ ಈ ತಪ್ಪನ್ನು ಸತ್ಯವೆಂದು ಭಾವಿಸಿ ಸಾವಿರಾರು ಜನರು ನಮ್ಮನ್ನು ಹಿಂಬಾಲಿಸುತ್ತಿರಬಹುದು! ಆಗ ಅವರೆಲ್ಲರ ಪಾಪಭಾರವನ್ನು ನಾವೇ ಹೊರುವವರಾಗುತ್ತೇವೆ.

«مَنْ سَنَّ سُنَّةً سَيِّئَةً فَعَلَيْهِ وِزْرُهَا وَوِزْرُ مَنْ عَمِلَ بِهَا إِلَى يَوْمِ الْقِيَامَةِ. وَمَنْ سَنَّ سُنَّةً حَسَنَةً فَلَهُ أَجْرُهَا وَأَجْرُ مَنْ عَمِلَ بِهَا إِلَى يَوْمِ الْقِيَامَةِ».

“ಯಾರಾದರೂ ಒಂದು ಕೆಟ್ಟ ಚರ್ಯೆ ಪ್ರಾರಂಭಿಸಿದರೆ ಅವನಿಗೆ ಅದರ ದೋಷ ಮತ್ತು ಪುನರುತ್ಥಾನ ದಿನದ ತನಕ ಅದನ್ನು ಮಾಡುವವರೆಲ್ಲರಿಗೆ ಸಿಗುವ ದೋಷ ಸಿಗಲಿದೆ. ಯಾರಾದರೂ ಒಂದು ಒಳ್ಳೆಯ ಚರ್ಯೆ ಪ್ರಾರಂಭಿಸಿದರೆ ಅವನಿಗೆ ಅದರ ಪುಣ್ಯ ಮತ್ತು ಪುನರುತ್ಥಾನ ದಿನದ ತನಕ ಅದನ್ನು ನಿರ್ವಹಿಸುವವರೆಲ್ಲರಿಗೆ ಸಿಗುವ ಪುಣ್ಯ ಸಿಗಲಿದೆ.”

ಸಹೋದರರೇ! ನಿಮ್ಮ ದೇಹದ ಮೇಲೆ ಕರುಣೆ ತೋರಿಸಿ. ನಿಮ್ಮ ದೇಹದ ಮೇಲೆ ಕರುಣೆ ತೋರಿಸಿ. ಜನರಿಗೆ ಒಳ್ಳೆಯ ಚರ್ಯೆಗಳನ್ನು ಕಲಿಸಿಕೊಡಿರಿ. ಜನರಿಗೆ ಮರೆತು ಹೋದ, ಜನರು ನಿರ್ವಹಿಸದ, ನಿರ್ಜೀವವಾಗಿ ಹೋದ ಪ್ರವಾದಿಯವರ(ﷺ) ಸುನ್ನತ್ತನ್ನು ಜೀವಂತಗೊಳಿಸಿ ಅವರಿಗೆ ಕಲಿಸಿಕೊಡಿರಿ. ಅವರು ಅದನ್ನು ನಿರ್ವಹಿಸಿದರೆ ಅದರ ಪುಣ್ಯ ನಿಮಗೆ ಸಿಗಲಿದೆ. ಅವರ ನಂತರದ ತಲೆಮಾರು ಅದನ್ನು ನಿರ್ವಹಿಸಿದರೆ ಅದರ ಪುಣ್ಯವೂ ನಿಮ್ಮ ಖಾತೆಗೆ

ಜಮೆಯಾಗಲಿದೆ. ಆದರೆ ನೀವೊಂದು ಬಿದ್‌ಅತ್ತನ್ನು ಪ್ರಾರಂಭಿಸಿ ಜನರು ಅದನ್ನು ನಿರ್ವಹಿಸಿದರೆ ಅದರ ದೋಷ ನಿಮಗೆ ತಾಗಲಿದೆ. ಅವರ ನಂತರದವರು ಅದನ್ನು ನಿರ್ವಹಿಸಿದರೆ ಅವರೆಲ್ಲರ ದೋಷಗಳು ನಿಮ್ಮ ಖಾತೆಯಲ್ಲಿ ಜಮೆಯಾಗಲಿವೆ.

ಒಟ್ಟಿನಲ್ಲಿ, ಅಲ್ಲಾಹನನ್ನು ಭಯಪಟ್ಟು ಜೀವಿಸಿರಿ. ಪ್ರತಿಕ್ಷಣದಲ್ಲೂ ಅಲ್ಲಾಹನ ಕಡೆಗೆ ಮರಳಿರಿ. ಅಲ್ಲಾಹನ ಗ್ರಂಥವನ್ನು ಬಿಗಿಯಾಗಿ ಹಿಡಿದುಕೊಳ್ಳಿರಿ. ಕುರ್‌ಆನನ್ನು ಹಿಂಬಾಲಿಸಿ ಜೀವಿಸಬೇಕೆಂದು ಕುರ್‌ಆನಿನಲ್ಲಿ ಅನೇಕ ಕಡೆ ಅಲ್ಲಾಹು ಆಜ್ಞಾಪಿಸಿದ್ದಾನೆ. ಅನೇಕ ಕಡೆ ಆಜ್ಞಾಪಿಸಿದ್ದಾನೆ. ಅಲ್ಲಾಹನ ಗ್ರಂಥ ನಮ್ಮ ಮುಂದಿದೆ. ಅದರ ಸಾವಿರ ಸಾವಿರ ಆಯತ್‌ಗಳನ್ನು ನಾವು ಕಂಠಪಾಠ ಮಾಡಿದ್ದೇವೆ. ಕಂಠಪಾಠ ಮಾಡಬೇಕಾದುದು ಅವಶ್ಯ. ಆದರೆ ಎಲ್ಲಿದೆ ಅನುಸರಣೆ? ಕುರ್‌ಆನಿನಲ್ಲಿರುವ ಪ್ರಕಾರ ನಾವು ಕರ್ಮವೆಸಗುತ್ತಿದ್ದೇವೆಯೇ? ನಾವು ಕುರ್‌ಆನನ್ನು ಕಲಿಯುತ್ತೇವೆ. ಆದರೆ ಅದು ನಮ್ಮ ಜೀವನದಲ್ಲಿದೆಯೇ?

ಒಗ್ಗಟ್ಟಾಗಬೇಕೆಂದು ಕುರ್‌ಆನ್ ಆದೇಶಿಸುವುದಿಲ್ಲವೇ? ಕುರ್‌ಆನ್ ಮತ್ತು ಸುನ್ನತ್ತನ್ನು ಬಿಗಿಯಾಗಿ ಹಿಡಿದು ಜೀವಿಸಬೇಕೆಂದು ಕುರ್‌ಆನ್ ಆದೇಶಿಸುವುದಿಲ್ಲವೇ? ಅಸತ್ಯವನ್ನು ತೊರೆಯಬೇಕೆಂದು ಆದೇಶಿಸುವುದಿಲ್ಲವೇ? ಬಿದ್‌ಅತ್‌ಗಳನ್ನು ತೊರೆಯಬೇಕೆಂದು ಆದೇಶಿಸುವುದಿಲ್ಲವೇ? ಶಿರ್ಕ್ ಮತ್ತು ದುರ್ಮಾರ್ಗದ ವಿರುದ್ಧ ಹೋರಾಡಬೇಕೆಂದು ಆದೇಶಿಸುವುದಿಲ್ಲವೇ? ನಾವು ಕುರ್‌ಆನಿಗೆ ಅನುಗುಣವಾಗಿ ಚಲಿಸಬೇಕು. ನಮ್ಮಲ್ಲಿ ಒಬ್ಬೊಬ್ಬರೂ ಕುರ್‌ಆನಿನ ಪ್ರಕಾರ ಜೀವಿಸಲು ಪಣತೊಡಬೇಕು. ನಮ್ಮ ಕುಟುಂಬಕ್ಕೆ ಕುರ್‌ಆನನ್ನು ಕಲಿಸಲು ಪಣತೊಡಬೇಕು. ಜನರನ್ನು ಸರಿಯಾದ ಮನ್‌ಹಜ್‌ನಲ್ಲಿ ಸರಿಯಾದ ಅಕೀದದಲ್ಲಿ ಬೆಳೆಸಲು ಪಣತೊಡಬೇಕು. ಶಿರ್ಕಿನ ಬಗ್ಗೆ, ಅಲ್ಲಾಹು ಅಲ್ಲದವರಲ್ಲಿ ಪ್ರಾರ್ಥಿಸುವ ಬಗ್ಗೆ, ಅಲ್ಲಾಹು ಅಲ್ಲದವರ ಹೆಸರಲ್ಲಿ ಬಲಿ ನೀಡುವ ಬಗ್ಗೆ, ಅಲ್ಲಾಹು ಅಲ್ಲದವರಲ್ಲಿ ಸಹಾಯ ಬೇಡುವ ಬಗ್ಗೆ ಎಚ್ಚರಿಕೆ ನೀಡಬೇಕು.

ಜಗತ್ತಿನಲ್ಲಿ ಲಕ್ಷಾಂತರ ದಾಈಗಳಿದ್ದಾರೆ. ಭೂಮಿಯ ಉದ್ದಗಲಗಳಲ್ಲೂ ದಾಈಗಳಿದ್ದಾರೆ. ಆದರೆ ಮೇಲೆ ಹೇಳಿದ ಯಾವುದೂ ಅವರ ಪ್ರಕಾರ ಕೆಡುಕುಗಳಲ್ಲ. ದುರಾಚಾರಗಳಲ್ಲ. ಜನರು ಅಸತ್ಯದಲ್ಲಿ ಜೀವಿಸುತ್ತಿರುವಾಗ ಅವರಿಗೆ ಆ ಅಸತ್ಯವನ್ನು ಮನವರಿಕೆ ಮಾಡಿಕೊಡಲು ನಾವು ಪ್ರಯತ್ನಿಸದಿದ್ದರೆ ನಾವು ದಾಈಗಳಾಗಿದ್ದು ಏನು ಪ್ರಯೋಜನ? ನಮ್ಮ ದಅ್‌ವತ್‌ನಿಂದ ಏನು ಪ್ರಯೋಜನ? ನಮ್ಮ ದಅ್‌ವತ್ ಅವರಿಗೆ ಕೆಡುಕನ್ನಲ್ಲದೆ ಇನ್ನೇನನ್ನೂ ಹೆಚ್ಚಿಸದು. ದುರ್ಮಾರ್ಗವನ್ನಲ್ಲದೆ ಇನ್ನೇನನ್ನೂ ಹೆಚ್ಚಿಸದು. ದಾಈಗಳು ಜಗತ್ತಿನಾದ್ಯಂತ ಹಬ್ಬಿಕೊಂಡಿದ್ದಾರೆ. ದಾಈಗಳು ಹೆಚ್ಚಾದಂತೆ ಪಂಗಡ ಮತ್ತು ಗುಂಪುಗಳೂ ಹೆಚ್ಚಾಗುತ್ತಿವೆ! ಜನರಿಗೆ ಪರೀಕ್ಷೆಗಳೂ ಹೆಚ್ಚಾಗುತ್ತಿವೆ! ಇದಕ್ಕೆ ಕಾರಣ, ಈ ದಾಈಗಳು ಪ್ರವಾದಿಗಳ ಮಾರ್ಗವನ್ನು ಹಿಂಬಾಲಿಸಿಲ್ಲ. ಪ್ರವಾದಿಗಳು ದಅ್‌ವತ್ ಮಾಡಿದಂತೆ ದಅ್‌ವತ್ ಮಾಡಿಲ್ಲ.

ಪ್ರವಾದಿಗಳು ಮೊಟ್ಟಮೊದಲು ಜನರ ವಿಶ್ವಾಸವನ್ನು ಸರಿಪಡಿಸುತ್ತಿದ್ದರು. ಒಬ್ಬ ಪ್ರವಾದಿ ಅವರ ಜನತೆಗೆ ಪ್ರವಾದಿಯಾಗಿ ಬರುವಾಗ ಅಲ್ಲಿ ಶಿರ್ಕ್ ತಾಂಡವವಾಡುತ್ತಿರುತ್ತದೆ. ದುಷ್ಕೃತ್ಯಗಳಿರುತ್ತವೆ. ಅನಾಚಾರ–ದುರಾಚಾರಗಳಿರುತ್ತವೆ. ಪ್ರವಾದಿಗಳು ಮೊಟ್ಟಮೊದಲು ಜನರ ವಿಶ್ವಾಸವನ್ನು ಸರಿಪಡಿಸುವುದರ ಕಡೆಗೆ ಗಮನ ನೀಡುತ್ತಾರೆ. ಅಲ್ಲಾಹು ಅಲ್ಲದವರೊಂದಿಗೆ ಪ್ರಾರ್ಥಿಸುವ, ಅಲ್ಲಾಹು ಅಲ್ಲದವರಿಗೆ ಬಲಿ ನೀಡುವ, ವಿಗ್ರಹಗಳನ್ನು ಪೂಜಿಸುವ, ಮಲಕ್‌ಗಳನ್ನು ಮತ್ತು ಮಹಾಪುರುಷರನ್ನು ಆರಾಧಿಸುವ, ಕಲ್ಲು–ಮರಗಳನ್ನು ಪೂಜಿಸುವ ಜನರ ಬಳಿಗೆ ಬಂದು ಪ್ರವಾದಿಗಳು ಏನು ಮಾಡುತ್ತಾರೆ? ಮೊಟ್ಟಮೊದಲು ಅವರ ವಿಶ್ವಾಸವನ್ನು ಸರಿಪಡಿಸುತ್ತಾರೆ.

ಇಸ್ಲಾಮೀ ಜಗತ್ತಿನ ಕಡೆಗೆ ನೋಡಿರಿ. ಈಜಿಪ್ಟನ್ನು ನೋಡಿರಿ. ಸುಡಾನನ್ನು ನೋಡಿರಿ. ಪಾಕಿಸ್ಥಾನವನ್ನು ನೋಡಿರಿ. ಅಲ್ಲೆಲ್ಲಾ ಗೋರಿಗಳನ್ನು ಆರಾಧಿಸಲಾಗುತ್ತಿದೆ. ದಾಈಗಳು ತಮ್ಮ ದಅ್‌ವತ್ತನ್ನು ತೌಹೀದಿನ ಮೇಲೆ ಕೇಂದ್ರೀಕರಿಸಲು ವಿಫಲರಾಗುತ್ತಿದ್ದಾರೆ.

ಸಹೋದರರೇ! ಪ್ರವಾದಿಯವರು(ﷺ) ಪದೇ ಪದೇ ಸಹಾಬಿಗಳಿಂದ ಶಿರ್ಕ್ ಮಾಡುವುದಿಲ್ಲವೆಂದು ಬೈಅತ್ ಮಾಡಿಸುತ್ತಿದ್ದರು. ಅಬೂಬಕರ್, ಉಮರ್, ಇಬ್ನ್ ಮಸ್‌ಊದ್, ಉಬಾದ ಇಬ್ನ್ ಸಾಮಿತ್ ಮುಂತಾದವರೆಲ್ಲರೂ ಶಿರ್ಕ್ ಮಾಡುವುದಿಲ್ಲ ಮತ್ತು ನಮಾಝನ್ನು ಸರಿಯಾಗಿ ನಿರ್ವಹಿಸುತ್ತೇವೆಂದು ಪ್ರವಾದಿಯವರೊಂದಿಗೆ(ﷺ) ಬೈಅತ್ ಮಾಡುತ್ತಿದ್ದರು. ಅಬೂಬಕರ್, ಉಮರ್ ಮುಂತಾದ ಸಹಾಬಾ ದಿಗ್ಗಜರು ಬೈಅತ್ ಮಾಡುತ್ತಿದ್ದರು. ಕಾರಣ, ಕಾಲಕಾಲಕ್ಕೆ ಅಕೀದವನ್ನು ನವೀಕರಣಗೊಳಿಸಬೇಕಾಗಿದೆ. ಅಕೀದವನ್ನು ನಮ್ಮ ಮನಸ್ಸಿನಲ್ಲಿ ದೃಢವಾಗಿ ನೆಲೆಯೂರಿಸಬೇಕಾಗಿದೆ. ಶಿರ್ಕ್ ಮಾಡುವುದಿಲ್ಲವೆಂದು ಪ್ರವಾದಿಯವರು(ﷺ) ಸಹಾಬಾಗಳಿಂದ ಬೈಅತ್ ಮಾಡಿಸುತ್ತಿದ್ದರು. ಆದರೆ ಇಂದು ನೀವು ಯಾರೊಂದಿಗಾದರೂ ಶಿರ್ಕ್ ಮಾಡುವುದಿಲ್ಲವೆಂದು ಬೈಅತ್ ಮಾಡಿರಿ ಎಂದು ಹೇಳಿದರೆ ಅವರ ಉತ್ತರ ಹೇಗಿರಬಹುದು? ಶಿರ್ಕ್ ಮಾಡಬೇಡಿ ಎಂದು ಹೇಳಿದಾಗಲೇ ಅವರು ನಾವೇನು ನಿಮಗೆ ಮುಶ್ರಿಕರಂತೆ ಕಾಣುತ್ತಿದ್ದೇವೆಯೇ? ಎಂದು ಕೇಳುತ್ತಾರೆ. ಇನ್ನು ಶಿರ್ಕ್ ಮಾಡುವುದಿಲ್ಲವೆಂದು ಬೈಅತ್ ಮಾಡಿರಿ ಎಂದು ಹೇಳಿದರೆ ಅವರ

ಪ್ರತಿಕ್ರಿಯೆ ಹೇಗಿರಬಹುದು? ಅಬೂಬಕರ್, ಉಮರ್ ಮುಂತಾದ ಸಹಾಬಾ ಶ್ರೇಷ್ಠರು ಶಿರ್ಕ್ ಮಾಡುವುದಿಲ್ಲವೆಂದು ಪ್ರವಾದಿಯವರೊಂದಿಗೆ(ﷺ) ಕಾಲಕಾಲಕ್ಕೆ ಬೈಅತ್ ಮಾಡುತ್ತಿದ್ದರು. ಇಬ್ರಾಹೀಮ್ (ﷺ) ರವರು ಪ್ರಾರ್ಥಿಸಿದರು:

﴿وَٱجْنُبْنِى وَبَنِىَّ أَن نَّعْبُدَ ٱلْأَصْنَامَ ﴿٣٥﴾﴾

"ನನ್ನನ್ನೂ ನನ್ನ ಸಂತಾನವನ್ನೂ ವಿಗ್ರಹಾರಾಧನೆಯಿಂದ ದೂರ ಮಾಡು." (ಕುರ್‌ಆನ್ 14:35)

ಇಬ್ರಾಹೀಮ್(ﷺ) ಪ್ರವಾದಿಗಳ ತಂದೆ. ಅಲ್ಲಾಹನ ಆಪ್ತ ಗೆಳೆಯ. ಆದರೂ ಅವರು ಪ್ರಾರ್ಥಿಸುತ್ತಾರೆ:

﴿وَٱجْنُبْنِى وَبَنِىَّ أَن نَّعْبُدَ ٱلْأَصْنَامَ ﴿٣٥﴾ رَبِّ
إِنَّهُنَّ أَضْلَلْنَ كَثِيرًا مِّنَ ٱلنَّاسِ ۖ فَمَن تَبِعَنِى فَإِنَّهُۥ
مِنِّى ۖ وَمَنْ عَصَانِى فَإِنَّكَ غَفُورٌ رَّحِيمٌ ﴿٣٦﴾﴾

"ನನ್ನನ್ನೂ ನನ್ನ ಸಂತಾನವನ್ನೂ ವಿಗ್ರಹಾರಾಧನೆಯಿಂದ ದೂರ ಮಾಡು. ಓ ನನ್ನ ರಬ್ಬೇ! ಅವು ಈಗಾಗಲೇ ಅನೇಕ ಜನರನ್ನು ದಾರಿತಪ್ಪಿಸಿವೆ. ಆದ್ದರಿಂದ ಯಾರು ನನ್ನನ್ನು ಹಿಂಬಾಲಿಸುತ್ತಾರೋ ಅವರು ನನ್ನವರು. ಯಾರಾದರೂ ನನ್ನನ್ನು ಹಿಂಬಾಲಿಸುವುದಿಲ್ಲವೆಂದಾದರೆ ಖಂಡಿತವಾಗಿಯೂ ನೀನು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆ ತೋರುವವನೂ ಆಗಿರುವೆ." (ಕುರ್‌ಆನ್ 14:35–36)

ತನ್ನ ಸಂತಾನ ಪರಂಪರೆಯಲ್ಲಿ ಅನೇಕ ಪ್ರವಾದಿಗಳು ಬರುತ್ತಾರೆಂದು ಅವರಿಗೆ ಗೊತ್ತಿತ್ತು. ಆದರೂ ಅವರು ಶಿರ್ಕನ್ನು ಭಯಪಟ್ಟರು. ನಾವು ಶಿರ್ಕನ್ನು ಭಯಪಡದಿರುವುದಾದರೂ ಹೇಗೆ?

«يَا مُقَلِّبَ الْقُلُوبِ ثَبِّتْ قُلُوبَنَا عَلَى دِينِكَ».

"ಓ ಹೃದಯಗಳನ್ನು ಹೊರಳಿಸುವವನೇ! ನನ್ನ ಹೃದಯವನ್ನು ನಿನ್ನ ಧರ್ಮದಲ್ಲಿ ಅಚಲವಾಗಿ ನಿಲ್ಲಿಸು."

ಪ್ರವಾದಿಯವರು(ﷺ) ಈ ಪ್ರಾರ್ಥನೆಯನ್ನು ಪ್ರಾರ್ಥಿಸುತ್ತಲೂ, ಸಹಾಬಿಗಳಿಗೆ ಕಲಿಸಿಕೊಡುತ್ತಲೂ ಇದ್ದರು. ಅವರೆಲ್ಲರೂ ಶಿರ್ಕನ್ನು ಭಯಪಡುತ್ತಿದ್ದರು. ಆದರೆ ನಮ್ಮ ಸ್ಥಿತಿಯೇನು? ನಮ್ಮ ಜೀವನದಲ್ಲಿ ಶಿರ್ಕ್ ಬರಲಾರದೆಂದು ನಮಗೆ ಖಾತ್ರಿಯಾಗಿ ಬಿಟ್ಟಿದೆ!! ನಮ್ಮ ಜೀವನದಲ್ಲಿ ನಿಫಾಕ್ (ಕಾಪಟ್ಯ) ಬರಲಾರದೆಂದೂ ನಮಗೆ ಖಾತ್ರಿಯಾಗಿ ಬಿಟ್ಟಿದೆ!! ಸಹಾಬಾಗಳು ನಿಫಾಕನ್ನು ಅತಿಯಾಗಿ ಭಯಪಡುತ್ತಿದ್ದರು. ಇಬ್ನ್ ಅಬೀ ಮುಲೈಕ ಹೇಳುತ್ತಾರೆ: ನಾನು ಮುಹಮ್ಮದ್(ﷺ) ರವರ ಮೂವತ್ತು ಸಂಗಡಿಗರನ್ನು (ಸಹಾಬಾಗಳನ್ನು) ಭೇಟಿಯಾಗಿದ್ದೇನೆ. ಅವರೆಲ್ಲರೂ ನಿಫಾಕನ್ನು ಅತಿಯಾಗಿ ಭಯಪಡುತ್ತಿದ್ದರು. ಮನುಷ್ಯನು ನಿಫಾಕಿನ ಬಗ್ಗೆ ಭಯಪಡಲೇ ಬೇಕಾಗಿದೆ. ಶಿರ್ಕಿನ ಬಗ್ಗೆ ಭಯಪಡಲೇ ಬೇಕಾಗಿದೆ. ಹೃದಯವು ವಕ್ರವಾಗುವುದರ ಬಗ್ಗೆ ಭಯಪಡಲೇ ಬೇಕಾಗಿದೆ.

﴿رَبَّنَا لَا تُزِغْ قُلُوبَنَا بَعْدَ إِذْ هَدَيْتَنَا وَهَبْ لَنَا مِن
لَّدُنكَ رَحْمَةً ۚ إِنَّكَ أَنتَ ٱلْوَهَّابُ ﴿٨﴾﴾

"ಓ ನಮ್ಮ ರಬ್ಬೇ! ನಮಗೆ ಸನ್ಮಾರ್ಗವನ್ನು ದಯಪಾಲಿಸಿದ ಬಳಿಕ ನಮ್ಮ ಹೃದಯವನ್ನು ವಕ್ರಗೊಳಿಸಬೇಡ. ನಮಗೆ ನಿನ್ನ ಕಡೆಯ ದಯೆಯನ್ನು ಉದಾರವಾಗಿ ಕರುಣಿಸು. ಖಂಡಿತವಾಗಿಯೂ ನೀನು ಅತ್ಯುದಾರವಾಗಿ ಕರುಣಿಸುವವನಾಗಿರುವೆ." (ಕುರ್‌ಆನ್ 3:8)

﴿فَلَا يَأْمَنُ مَكْرَ ٱللَّهِ إِلَّا ٱلْقَوْمُ ٱلْخَـٰسِرُونَ ﴿٩٩﴾﴾

"ನಷ್ಟದಲ್ಲಿರುವ ಜನರಲ್ಲದೆ ಇನ್ನಾರೂ ಅಲ್ಲಾಹನ ತಂತ್ರದ ಬಗ್ಗೆ ನಿರ್ಭಯರಾಗಿರಲಾರರು." (ಕುರ್‌ಆನ್ 7:99)

ನಮ್ಮ ಹೃದಯವನ್ನು ಸಂರಕ್ಷಿಸುವಂತೆ ನಾವು ಅಲ್ಲಾಹನಲ್ಲಿ ಬೇಡುತ್ತೇವೆ. ಅಲ್ಲಾಹನ ಆಜ್ಞಾಪಾಲನೆ ಮಾಡುವುದು, ಅಲ್ಲಾಹನಿಗೆ ಸಂಪೂರ್ಣ ಶರಣಾಗುವುದು, ಅಲ್ಲಾಹನಲ್ಲಿ ಇಸ್ತಿಗ್ಫಾರ್ ಮಾಡುವುದು, ಅಲ್ಲಾಹನಿಗೆ ವಿನಮ್ರತೆ ತೋರುವುದು ಮುಂತಾದ ನಮ್ಮ ಹೃದಯದಲ್ಲಿ ಈಮಾನನ್ನು ಅಚಲವಾಗಿ ನಿಲ್ಲಿಸುವ ಮಾರ್ಗಗಳನ್ನು ನಾವು ಅನುಸರಿಸಬೇಕಾಗಿದೆ. ಇಸ್ಲಾಮ್ ನಮ್ಮ ಹೃದಯದಲ್ಲಿ ಆಳವಾಗಿ ಬೇರೂರುವಂತೆ ನಾವು ಮಾಡಬೇಕಾಗಿದೆ. ನಮ್ಮ ಮೂಲಕ ಜನರಿಗೆ ಹಿದಾಯತ್ ಕರುಣಿಸುವಂತೆ ನಾವು ಅಲ್ಲಾಹನಲ್ಲಿ ಬೇಡಬೇಕಾಗಿದೆ.

ಸಹೋದರರೇ! ಮುಸಲ್ಮಾನರ ಮಧ್ಯೆ ಪ್ರೀತಿ, ಪ್ರೇಮ, ಸಾಹೋದರ್ಯವನ್ನು ಜೀವಂತಗೊಳಿಸಬೇಕಾದುದು ನಮ್ಮ ಆದ್ಯ ಕರ್ತವ್ಯ. ಇದು ಕುರ್‌ಆನ್ ಮತ್ತು ಸುನ್ನತ್ತಿನ ಆಧಾರದಲ್ಲಿರಬೇಕೇ ವಿನಾ ನಿಫಾಕಿನ ಅಥವಾ ತೋರಿಕೆಯ ಆಧಾರದಲ್ಲಿರಬಾರದು. ಇದು

ಸತ್ಯದ ಆಧಾರದಲ್ಲಾಗಿರಬೇಕು. ನಾವು ನಮ್ಮ ಜೀವನದಲ್ಲಿ ಸತ್ಯವನ್ನು ಬೆಳಗಿಸಬೇಕು. ನಂತರ ಜನರನ್ನು ಅದರ ಕಡೆಗೆ ಆಮಂತ್ರಿಸಬೇಕು. ಈ ಸಾಹೋದರ್ಯತೆ, ಈ ಪ್ರೀತಿ ಮುಸಲ್ಮಾನರ ಮಧ್ಯೆ ಸದಾ ನೆಲೆನಿಂತಿರಬೇಕು.




"ನೀವೆಲ್ಲರೂ ಅಲ್ಲಾಹನ ಹಗ್ಗವನ್ನು ಬಿಗಿಯಾಗಿ ಹಿಡಿದುಕೊಳ್ಳಿರಿ. ಭಿನ್ನರಾಗಬೇಡಿ." (3:103)

ನಮ್ಮನ್ನು ಭಿನ್ನಗೊಳಿಸುವುದು ಏನು? ಸಂಶಯವೇ ಇಲ್ಲ. ನಮ್ಮ ಇಷ್ಟಾನಿಷ್ಟಗಳು. ನಮ್ಮ ಇಷ್ಟಾನಿಷ್ಟಗಳು ನಮ್ಮನ್ನು ಬೇರ್ಪಡಿಸುತ್ತವೆ. ನನಗೊಂದು ಅಭಿಪ್ರಾಯ. ನಿಮಗೊಂದು ಅಭಿಪ್ರಾಯ. ನಾನು ಒಬ್ಬನನ್ನು ಅನುಸರಿಸುತ್ತೇನೆ. ನೀವು ಇನ್ನೊಬ್ಬನನ್ನು ಅನುಸರಿಸುತ್ತೀರಿ. ನಮ್ಮ ಮಧ್ಯೆಯಿರುವ ಭಿನ್ನತೆಗಳಿಗೆ ನಾವು ಕುರ್‌ಆನನ್ನು ತೀರ್ಪುಗಾರನನ್ನಾಗಿ ಮಾಡುವುದಿಲ್ಲ. ನಮ್ಮ ಮಧ್ಯೆ ಒಡಕುಂಟಾಗುತ್ತದೆ. ದ್ವೇಷವುಂಟಾಗುತ್ತದೆ. ಕಲಹವುಂಟಾಗುತ್ತದೆ. ರಕ್ತ ಹರಿಯುತ್ತದೆ. ಮುಸ್ಲಿಮರು ಇಂದು ಯಾವ ದುಸ್ಥಿತಿಯಲ್ಲಿರುವರೋ ಅದಕ್ಕೆಲ್ಲಾ ಕಾರಣ ಈ ವೈಯುಕ್ತಿಕ ಇಷ್ಟಾನಿಷ್ಟಗಳು.

ಮುಸಲ್ಮಾನರನ್ನು ಸತ್ಯದ ಆಧಾರದಲ್ಲಿ, ಕುರ್‌ಆನ್ ಮತ್ತು ಸುನ್ನತ್ತಿನ ಆಧಾರದಲ್ಲಿ ಒಟ್ಟುಗೂಡಿಸುವಂತೆ ನಾನು ಅಲ್ಲಾಹನಲ್ಲಿ ಬೇಡಿಕೊಳ್ಳುತ್ತೇನೆ. ಈ ನಾಡಿನ ಯುವಕರನ್ನು ಕುರ್‌ಆನ್ ಮತ್ತು ಸುನ್ನತ್ತಿನ ಆಧಾರದ ಮೇಲೆ ಒಟ್ಟುಗೂಡಿಸುವಂತೆ ಬೇಡಿಕೊಳ್ಳುತ್ತೇನೆ. ಇಮಾಮ್ ಮುಹಮ್ಮದ್ ಇಬ್ನ್ ಅಬ್ದುಲ್ ವಹ್ಹಾಬ್‌ರ ಮೂಲಕ ಸಲಫಿಯ್ಯತ್ ಈ ನಾಡಿಗೆ ಬರುವುದಕ್ಕೆ ಮುನ್ನ ಈ ಉಪದ್ವೀಪದ ಸ್ಥಿತಿ ಹೇಗಿತ್ತೆಂದು ನಾವು ಚಿಂತಿಸಬೇಕಾಗಿದೆ. ಇಲ್ಲಿ ಮುಸಲ್ಮಾನರು ಹರಿದು ಹಂಚಾಗಿ ಹೋಗಿದ್ದರು. ಎಲ್ಲಿಯವರೆಗೆಂದರೆ ಅವರಲ್ಲಿ ಕೆಲವರು ನಮಾಝ್, ಉಪವಾಸ, ಝಕಾತ್ ಮುಂತಾದವುಗಳನ್ನಲ್ಲದೆ ಪರಲೋಕವನ್ನೂ ಸಹ ನಿಷೇಧಿಸುತ್ತಿದ್ದರು! ಅಲ್ಲಾಹು ಅವರನ್ನು ಕುರ್‌ಆನ್ ಮತ್ತು ಸುನ್ನತ್ತಿನ ಆಧಾರದಲ್ಲಿ ಒಟ್ಟುಗೂಡಿಸಿದ.

ಆದ್ದರಿಂದ ಓ ಸಹೋದರರೇ! ನಾವು ಆ ಅಂಧಕಾರದ ಯುಗವನ್ನು ನೆನಪಿಸಿಕೊಳ್ಳಬೇಕು. ಅದರ ನಂತರದ ಸುವರ್ಣ ಯುಗವನ್ನೂ ನೆನಪಿಸಿಕೊಳ್ಳಬೇಕು. ನಮ್ಮಲ್ಲಿ ಏನೇ ಭಿನ್ನಾಭಿಪ್ರಾಯ ಬಂದರೂ ಅದನ್ನು ಸೌಹಾರ್ದಯುತವಾಗಿ ಬಗೆಹರಿಸಿಕೊಳ್ಳಬೇಕು. ಸಿಟ್ಟು, ದ್ವೇಷ, ಹಗೆ ಇತ್ಯಾದಿಗಳೆಲ್ಲವನ್ನೂ ತೊರೆಯಬೇಕು. ಯಹೂದಿಗಳು, ಓರಿಯಂಟಲಿಸ್ಟ್‌ಗಳು ಮುಂತಾದ ಇಸ್ಲಾಮಿನ ಶತ್ರುಗಳು ಎಲ್ಲ ಕಡೆಯಲ್ಲೂ ನಮ್ಮನ್ನು ಸೂಕ್ಷ್ಮವಾಗಿ ವೀಕ್ಷಿಸುತ್ತಿದ್ದಾರೆ. ಅವರು ಅತಿಯಾಗಿ ದ್ವೇಷಿಸುವುದು ನಮ್ಮ ಈ ದಅ್‌ವತ್ತನ್ನಾಗಿದೆ. ಅಂದರೆ ಸಲಫೀ ದಅ್‌ವತ್ತನ್ನು. ಅಂದರೆ ಇಮಾಮ್ ಮುಹಮ್ಮದ್ ಇಬ್ನ್ ಅಬ್ದುಲ್ ವಹ್ಹಾಬರು ಜೀವಂತಗೊಳಿಸಿದ ಸಲಫಿ ಮನ್‌ಹಜನ್ನು. ಕಾರಣ ಅವರಿಗೆ ಗೊತ್ತಿದೆ ಇದೇ ಸತ್ಯವೆಂದು.

ಶಿಯಾಗಳು, ಯಹೂದಿಗಳು ಮತ್ತು ಕ್ರೈಸ್ತರು ಪರಸ್ಪರ ದ್ವೇಷಿಸುತ್ತಾರೆಂದು ನೀವು ತಪ್ಪುತಿಳಿಯಬೇಡಿ. ಅವರು ಪರಸ್ಪರ ಮಿತ್ರರು. ಅವರಿಗೆ ಪರಸ್ಪರ ದ್ವೇಷವಿಲ್ಲ. ಅದು ಕಟ್ಟುಕಥೆ. ಈ ಸುಳ್ಳನ್ನು ನೀವೆಂದೂ ನಂಬಬೇಡಿ. ಇದು ನಿಮ್ಮ ಕಣ್ಣಿಗೆ ಮಣ್ಣೆರಚುವ ತಂತ್ರ. ಯಹೂದಿ–ಕ್ರೈಸ್ತರು ಪರಸ್ಪರ ದ್ವೇಷಿಸುವುದಿಲ್ಲ. ಅವರು ದ್ವೇಷಿಸುವುದು ನಮ್ಮ ಈ ಮನ್‌ಹಜನ್ನು. ಅವರಲ್ಲಿ ಅನೇಕ ತತ್ವಜ್ಞಾನಿಗಳು ಮತ್ತು ಚಿಂತಕರಿದ್ದಾರೆ. ಅವರು ಇಸ್ಲಾಮನ್ನು ಕಲಿತಿದ್ದಾರೆ. ತಮ್ಮನ್ನು ಬಾಲದಂತೆ ಹಿಂಬಾಲಿಸುವ ಮತ್ತು ಇಸ್ಲಾಮ್ ಹಾಗೂ ಮುಸ್ಲಿಮರ ವಿರುದ್ಧ ತಮಗೆ ಸಹಾಯ ಮಾಡುವ ಗುಂಪು ಯಾವುದೆಂದು ಅವರಿಗೆ ತಿಳಿದಿದೆ. ಸತ್ಯದಲ್ಲಿರುವ ಗುಂಪು ಯಾವುದೆಂದೂ ಅವರಿಗೆ ತಿಳಿದಿದೆ. ಈ ಗುಂಪು ಯಾವತ್ತೂ ಅವರಿಗೆ ಶರಣಾಗದೆಂದು ಅವರಿಗೆ ತಿಳಿದಿದೆ. ಆದ್ದರಿಂದ ಸಹೋದರರೇ ಸಲಫಿ ಮನ್‌ಹಜ್‌ಗೆ ನಿಷ್ಠರಾಗಿ ಜೀವಿಸಿರಿ. ಭಿನ್ನಮತ ತಾಳಬೇಡಿ.

ನಮ್ಮ ಹೃದಯಗಳನ್ನು ಕುರ್‌ಆನ್ ಮತ್ತು ಸುನ್ನತ್ತಿನ ಆಧಾರದಲ್ಲಿ ಒಟ್ಟುಗೂಡಿಸಲು ಮತ್ತು ನಾವು ಕಾಣಲು ಬಯಸುವ ಇಸ್ಲಾಮಿನ ಇಝ್ಝತ್ತನ್ನು (ಪರಾಕ್ರಮವನ್ನು) ನಮ್ಮ ಕಣ್ಮುಂದೆ ತೋರಿಸಿಕೊಡಲು ನಾನು ಅಲ್ಲಾಹನಲ್ಲಿ ಪ್ರಾರ್ಥಿಸುತ್ತೇನೆ. ಅಲ್ಲಾಹು ನಮ್ಮ ಕನಸನ್ನು ನನಸಾಗಿ ಮಾಡಲಿ. ಆಮೀನ್. ■

### ತಸ್ಬೀಹ್ ಎಣಿಸುವುದು ಹೇಗೆ?

ಶೈಖ್ ನಾಸಿರುದ್ದೀನ್ ಅಲ್‌ಅಲ್ಬಾನಿ ಹೇಳುತ್ತಾರೆ:

"ಎಡಗೈಯ ಮೂಲಕ ತಸ್ಬೀಹ್ ಎಣಿಸುವವನು ಸುನ್ನತ್ತನ್ನು ವಿರೋಧಿಸಿದನು. ಹೆಚ್ಚಿನ ಜನರು ಮಾಡುವಂತೆ ಎರಡೂ ಕೈಗಳಿಂದ ತಸ್ಬೀಹ್ ಎಣಿಸುವವನು ಸರಿಯಾದ ಮತ್ತು ತಪ್ಪಾದ ಕೆಲಸವನ್ನು ಬೆರೆಸಿದನು. ಅಲ್ಲಾಹು ಅವನಿಗೆ ಕ್ಷಮಿಸಲೂಬಹುದು. ಬಲಗೈಯಿಂದ ತಸ್ಬೀಹ್ ಎಣಿಸುವವನು ಸರಿಯಾದ ಮಾರ್ಗದರ್ಶನದಲ್ಲಿದ್ದು ಪ್ರವಾದಿ ಮುಹಮ್ಮದ್(ಸ) ರವರ ಸುನ್ನತ್ತನ್ನು ಪಡೆದವನಾಗಿರುವನು."

(ಸಹೀಹುಲ್ ಅದಬಿಲ್ ಮುಫ್ರದ್ ಪುಟ 471)

# ಪ್ಯಾಲಸ್ತೀನ್ —ಮರಳಿ ಪಡೆಯುವುದು ಹೇಗೆ?

ಇಸ್ಲಾಮಿನ ಸುವರ್ಣಕಾಲದಲ್ಲಿ ಮುಸಲ್ಮಾನರು ಪ್ಯಾಲಸ್ತೀನನ್ನು ವಶದಲ್ಲಿಟ್ಟುಕೊಂಡದ್ದು ಇಸ್ಲಾಮಿನ ಹೆಸರಲ್ಲೇ ಆಗಿತ್ತು. ಮುಸಲ್ಮಾನರು ಪರ್ಶಿಯನ್ನರ, ರೋಮನ್ನರ, ಕಿಬ್ತಿಗಳ ರಾಜಧಾನಿಗಳನ್ನು ನಡುಗಿಸಿದ್ದು ಇಸ್ಲಾಮಿನ ಹೆಸರಲ್ಲೇ ಆಗಿತ್ತು.

ಶೈಖ್ ಮುಹಮ್ಮದ್ ಇಬ್ನ್ ಸಾಲಿಹ್ ಅಲ್‌ಉಸೈಮೀನ್

ಪ್ರವಾದಿಯವರು(ﷺ) ಮತ್ತು ಸಹಾಬಾಗಳು ಯಾವ 'ಇಸ್ಲಾಮ್'ನಲ್ಲಿದ್ದರೋ ಆ 'ಇಸ್ಲಾಮ್'ನ ಮೂಲಕವಲ್ಲದೆ 'ಅರಬ್ ರಾಷ್ಟ್ರೀಯತೆ'ಯ ಹೆಸರು ಹೇಳಿ ಪ್ಯಾಲಸ್ತೀನನ್ನು ವಾಪಸು ಪಡೆಯಲು ಅರಬಿಗಳಿಗೆ ಖಂಡಿತ ಸಾಧ್ಯವಿಲ್ಲ. —ಹೆಚ್ಚು ಬಲ್ಲವನು ಅಲ್ಲಾಹು.

ಅಲ್ಲಾಹು ಹೇಳುತ್ತಾನೆ:

﴿إِنَّ ٱلْأَرْضَ لِلَّهِ يُورِثُهَا مَن يَشَآءُ مِنْ عِبَادِهِۦ ۖ وَٱلْعَـٰقِبَةُ لِلْمُتَّقِينَ ١٢٨﴾

"ಖಂಡಿತವಾಗಿಯೂ ಭೂಮಿ ಅಲ್ಲಾಹನದ್ದು. ಅವನಿಚ್ಛಿಸಿದವರಿಗೆ ಅವನದನ್ನು ಉತ್ತರಾಧಿಕಾರವಾಗಿ ನೀಡುತ್ತಾನೆ. ಅಂತ್ಯವಿರುವುದು ಭಯಭಕ್ತಿಯಿಂದ ಜೀವಿಸುವವರಿಗೆ ಮಾತ್ರ." (ಕುರ್‌ಆನ್ 7:128)

ಅರಬಿಗಳು ಎಷ್ಟೇ ಪ್ರಯತ್ನಿಸಿದರೂ, ಭೂಮಿ ತುಂಬಾ ಪ್ರತಿಭಟನೆ ನಡೆಸಿದರೂ, ರಸ್ತೆಯ ಉದ್ದಗಲಗಳಲ್ಲಿ ಪ್ರದರ್ಶನ ಮಾಡಿದರೂ ಪ್ಯಾಲಸ್ತೀನನ್ನು ವಾಪಸು ಪಡೆಯುವಲ್ಲಿ ಯಶಸ್ವಿಯಾಗಲಾರರು. ಎಲ್ಲಿಯವರೆಗೆಂದರೆ ಅವರು 'ಇಸ್ಲಾಮ್' ಅನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಯಹೂದಿಗಳನ್ನು ಪ್ಯಾಲಸ್ತೀನಿನಿಂದ ಹೊರದಬ್ಬಲು ಕರೆ ನೀಡುವ ತನಕ. ಅವರು 'ಇಸ್ಲಾಮ್' ಅನ್ನು ಜೀವನದಲ್ಲಿ ಅಳವಡಿಸಿಕೊಂಡು ಯಹೂದಿಗಳ ವಿರುದ್ಧ ಯುದ್ಧಕ್ಕೆ ಕರೆ ನೀಡಿದರೆ ಪ್ರವಾದಿಯವರು(ﷺ) ನುಡಿದ ಭವಿಷ್ಯವಾಣಿ ನಿಜವಾಗುವುದು:

«لَا تَقُومُ السَّاعَةُ حَتَّى يُقَاتِلَ الْمُسْلِمُونَ الْيَهُودَ. فَيَقْتُلُهُمُ الْمُسْلِمُونَ حَتَّى يَخْتَبِئَ الْيَهُودِيُّ مِنْ وَرَاءِ الْحَجَرِ وَالشَّجَرِ. فَيَقُولُ الْحَجَرُ أَوِ الشَّجَرُ: يَا مُسْلِمُ! يَا عَبْدَ اللَّهِ! هَذَا يَهُودِيٌّ خَلْفِي. فَتَعَالَ فَاقْتُلْهُ.»

"ಮುಸಲ್ಮಾನರು ಯಹೂದಿಗಳೊಡನೆ ಯುದ್ಧ ಮಾಡುವ ತನಕ ಅಂತ್ಯದಿನ ಸಂಭವಿಸುವುದಿಲ್ಲ. ಮುಸಲ್ಮಾನರು ಯಹೂದಿಗಳನ್ನು ಕೊಲ್ಲುವರು. ಎಲ್ಲಿಯವರೆಗೆಂದರೆ ಕೆಲವು ಯಹೂದಿಗಳು ಕಲ್ಲು ಮತ್ತು ಮರಗಳ ಹಿಂದೆ ಅಡಗಿಕೊಳ್ಳುವರು. ಆಗ ಆ ಕಲ್ಲು ಅಥವಾ ಮರ ಹೇಳುವುದು: ಓ ಮಸಲ್ಮಾನನೇ! ಓ ಅಲ್ಲಾಹನ ದಾಸನೇ! ಇಗೋ ನನ್ನ ಹಿಂದೆ ಒಬ್ಬ ಯಹೂದಿಯಿದ್ದಾನೆ. ಬಾ. ಅವನನ್ನು ಕೊಲ್ಲು." (ಅಲ್‌ಬುಖಾರಿ ಮತ್ತು ಮುಸ್ಲಿಂ)

ಕಲ್ಲು ಮತ್ತು ಮರಗಳು ಮುಸಲ್ಮಾನರಿಗೆ ಯಹೂದಿಗಳನ್ನು

*36 ನೇ ಪುಟಕ್ಕೆ*

# ಅವಿಶ್ವಾಸಿಗಳನ್ನು ಕೊಲ್ಲಬೇಕೇ?

ಅಲ್ಲಾಹನನ್ನು ಅಥವಾ ಪ್ರವಾದಿಯವರನ್ನು ನಿಂದಿಸುವವರು, ಧರ್ಮವನ್ನು ಗೇಲಿ ಮಾಡುವವರು ಮುಂತಾದವರು ಅವಿಶ್ವಾಸಿಗಳಾಗಿದ್ದು ಅವರನ್ನು ಕೊಲ್ಲಬೇಕೆಂದು ಶೈಖುಲ್ ಇಸ್ಲಾಮ್ ಇಬ್ನ್ ತೈಮಿಯ್ಯ, ಶೈಖ್ ಇಬ್ನುಲ್ ಕಯ್ಯಿಮ್, ಶೈಖ್ ಮುಹಮ್ಮದ್ ಇಬ್ನ್ ಅಬ್ದುಲ್ ವಹ್ಹಾಬ್ ಮುಂತಾದವರ ಗ್ರಂಥಗಳಲ್ಲಿ ನಮಗೆ ಓದಲು ಸಿಗುತ್ತದೆ. ಇಲ್ಲಿ ನನ್ನ ಪ್ರಶ್ನೆಯೇನೆಂದರೆ ಇಂದು ಜೀವಿಸುತ್ತಿರುವ ಎಲ್ಲ ಅವಿಶ್ವಾಸಿಗಳು (ಮುಸ್ಲಿಮೇತರರು) ಕೊಲೆಗೆ ಅರ್ಹರೇ? ಅವರಿಗೆ ಇಸ್ಲಾಮಿನ ಸಂದೇಶ ತಲುಪಿದರೂ ತಲುಪದಿದ್ದರೂ ಅವರನ್ನು ಕೊಲ್ಲಬೇಕೇ? —ಶೈಖ್ ಮುಹಮ್ಮದ್ ಸಾಲಿಹ್ ಅಲ್‌ಮುನಜ್ಜಿದ್ ಉತ್ತರಿಸುತ್ತಾರೆ.

✍ ಶೈಖ್ ಮುಹಮ್ಮದ್ ಸಾಲಿಹ್ ಅಲ್‌ಮುನಜ್ಜಿದ್

ಅಲ್ಲಾಹನಿಗೆ ಸರ್ವಸ್ತುತಿ ಮೀಸಲು.

ಮೊದಲನೆಯದಾಗಿ, ಇಂತಿಂತಹವರು ಕೊಲೆಗೆ ಅರ್ಹರು ಎಂದು ವಿದ್ವಾಂಸರು ಹೇಳಿರುವುದು ಇಸ್ಲಾಮ್ ಧರ್ಮದಿಂದ ಹೊರತಳ್ಳುವಂತಹ ಮಾತುಗಳನ್ನು ಹೇಳಿ, ಅಥವಾ ಕೆಲಸಗಳನ್ನು ಮಾಡಿ ಧರ್ಮಪರಿತ್ಯಾಗಿಗಳಾಗಿ ಮಾರ್ಪಟ್ಟವರ ಬಗ್ಗೆಯಾಗಿದೆ. ಧರ್ಮಪರಿತ್ಯಾಗವು ನಂಬಿಕೆಯಲ್ಲೂ, ಮಾತಿನಲ್ಲೂ ಅಥವಾ ಕ್ರಿಯೆಯಲ್ಲೂ ಉಂಟಾಗಬಹುದು.

ಧರ್ಮಪರಿತ್ಯಾಗಿಯ ಬಗ್ಗೆ ವಿವರಿಸುತ್ತಾ ಇಬ್ನುಲ್ ಮುಫ್ಲಿಹ್(ﷺ) ಹೇಳುತ್ತಾರೆ:

هُــوَ الرَّاجِعُ عَــنْ دِينِ الْإِسْــلَامِ إِلَى الْكُفْــرِ. إِمَّا نُطْقًــا أَوِ اعْتِقَادًا أَوْ شَــكًّا. وَقَدْ يَحْصُــلُ بِالْفِعْلِ.

“ಧರ್ಮಪರಿತ್ಯಾಗಿ ಎಂದರೆ ಇಸ್ಲಾಮ್ ಧರ್ಮವನ್ನು ತ್ಯಜಿಸಿ ಅವಿಶ್ವಾಸಕ್ಕೆ ಮರಳುವವನು. ಮಾತಿನ ಮೂಲಕ, ನಂಬಿಕೆಯ ಮೂಲಕ ಅಥವಾ ಸಂಶಯದ ಮೂಲಕವೂ ಧರ್ಮಪರಿತ್ಯಾಗ ಸಂಭವಿಸುತ್ತದೆ. ಅದು ಕೆಲವೊಮ್ಮೆ ಕ್ರಿಯೆ ಮೂಲಕವೂ ಸಂಭವಿಸುತ್ತದೆ.” (ಅಲ್‌ಮುಬ್ದಿಅ್ 9/175)

ಧರ್ಮಪರಿತ್ಯಾಗಿಯನ್ನು ಕೊಲ್ಲಬೇಕು ಎನ್ನುವುದಕ್ಕೆ ಪುರಾವೆ ಪ್ರವಾದಿಯವರ(ﷺ) ಈ ವಚನ:

«مَنْ بَدَّلَ دِينَهُ فَاقْتُلُوهُ».

“ಧರ್ಮವನ್ನು ಬದಲಿಸಿಕೊಂಡವನನ್ನು ಕೊಲ್ಲಿರಿ.” (ಅಲ್‌ಬುಖಾರಿ 6922)

ಈ ಹದೀಸಿನ ವ್ಯಾಖ್ಯಾನದಲ್ಲಿ ಇಬ್ನ್ ಅಬ್ದಿಲ್ ಬರ್(ﷺ) ಹೇಳುತ್ತಾರೆ:

وَقَالَ مَالِــكٌ رَحِمَهُ اللَّهُ: إِنَّمَا عُنِــيَ بِهَذَا الْحَدِيثِ مَنْ خَــرَجَ مِنَ الْإِسْــلَامِ إِلَــى الْكُفْــرِ. وَأَمَّا مَنْ

خَرَجَ مِنَ الْيَهُودِيَّـــةِ أَوِ النَّصْرَانِيَّـــةِ أَوْ مِنْ كُفْرٍ إِلَى كُفْرٍ فَلَمْ يُعْنِ بِهَـــذَا الْحَدِيثِ. وَعَلَـــى قَوْلِ مَالِكٍ هَذَا جَمَاعَـــةُ الْفُقَهَاءِ.

"ಇಮಾಮ್ ಮಾಲಿಕ್(ﷺ) ಹೇಳುತ್ತಾರೆ: ಈ ಹದೀಸಿನಲ್ಲಿ ಕೊಲ್ಲಬೇಕೆಂದು ಹೇಳಿರುವುದು ಇಸ್ಲಾಮ್ ಧರ್ಮವನ್ನು ತ್ಯಜಿಸಿ ಅವಿಶ್ವಾಸಕ್ಕೆ ಹೋದವನ ಬಗ್ಗೆಯಾಗಿದೆಯೇ ಹೊರತು ಯಹೂದಿ ಧರ್ಮವನ್ನು, ಅಥವಾ ಕ್ರೈಸ್ತ ಧರ್ಮವನ್ನು, ಅಥವಾ ಇನ್ನಾವುದೇ ಅವಿಶ್ವಾಸದ ಧರ್ಮವನ್ನು ತ್ಯಜಿಸಿ ಇನ್ನೊಂದು ಅವಿಶ್ವಾಸದ ಧರ್ಮಕ್ಕೆ ಹೋದವರ ಬಗ್ಗೆಯಲ್ಲ. ಬಹುಪಾಲು ಕರ್ಮಶಾಸ್ತ್ರ ವಿದ್ವಾಂಸರು ಇಮಾಮ್ ಮಾಲಿಕ್‌ರವರ ಈ ಅಭಿಪ್ರಾಯದಲ್ಲಿದ್ದಾರೆ." (ಅತ್ತಮ್‌ಹೀದ್ 5/311–312)

ಪ್ರವಾದಿಯವರು(ﷺ) ಹೇಳುತ್ತಾರೆ:

«لَا يَحِـــلُّ دَمُ امْـــرِئٍ مُسْـــلِمٍ إِلَّا بِإِحْـــدَى ثَلَاثٍ: الثَّيِّبُ الزَّانِـــي وَالنَّفْـــسُ بِالنَّفْسِ وَالتَّـــارِكُ لِدِينِهِ الْمُفَـــارِقُ لِلْجَمَاعَةِ».

"ಈ ಮೂರು ಕಾರಣದಿಂದಲ್ಲದೆ ಒಬ್ಬ ಮುಸಲ್ಮಾನನನ್ನು ಕೊಲ್ಲಬಾರದು. ವೃದ್ಧ ವ್ಯಭಿಚಾರಿ, ಕೊಲೆಗೆ ಬದಲಾಗಿ ಕೊಲೆ ಮತ್ತು ಧರ್ಮವನ್ನು ತ್ಯಜಿಸಿ ಸಮಾಜವನ್ನು ತೊರೆದವನು." (ಅಲ್‌ಬುಖಾರಿ 6878, ಮುಸ್ಲಿಂ 1676)

ಹಾಫಿಝ್ ಇಬ್ನ್ ರಜಬ್ ಅಲ್‌ಹಂಬಲೀ(ﷺ) ಹೇಳುತ್ತಾರೆ:

وَأَمَّا التَّارِكُ لِدِينِـــهِ الْمُفَارِقُ لِلْجَمَاعَـــةِ فَالْمُرَادُ بِهِ مَـــنْ تَرَكَ الْإِسْـــلَامَ وَارْتَـــدَّ عَنْهُ، وَفَـــارَقَ جَمَاعَةَ الْمُسْـــلِمِينَ. كَمَـــا جَـــاءَ التَّصْرِيـــحُ بِذَلِـــكَ فِي حَدِيـــثِ عُثْمَانَ.

"ಧರ್ಮವನ್ನು ತ್ಯಜಿಸಿ ಸಮಾಜವನ್ನು ತೊರೆದವನು ಎಂದರೆ ಇಸ್ಲಾಮ್ ಧರ್ಮವನ್ನು ತ್ಯಜಿಸಿ ಧರ್ಮಪರಿತ್ಯಾಗಿಯಾಗಿ ಮಾರ್ಪಟ್ಟು ಮುಸ್ಲಿಮ್ ಸಮಾಜದಿಂದ ಹೊರಹೋದವನು. ಉಸ್ಮಾನ್‌ರವರ (ﷺ) ಹದೀಸಿನಲ್ಲಿ ಇದು ಸ್ಪಷ್ಟವಾಗಿ ವರದಿಯಾಗಿದೆ." (ಜಾಮಿಉಲ್ ಉಲೂಮಿ ವಲ್ ಹಿಕಮ್ 1/318)

ನಂತರ ಅವರು ಹೇಳುತ್ತಾರೆ:

وَأَمَّـــا تَـــرْكُ الدِّيـــنِ وَمُفَارَقَـــةُ الْجَمَاعَـــةِ فَمَعْنَاهُ الِارْتِدَادُ عَنْ دِينِ الْإِسْـــلَامِ وَلَوْ أَتَى بِالشَّـــهَادَتَيْنِ. فَلَوْ سَـــبَّ اللَّهَ وَرَسُـــولَهُ صَلَّى اللَّهُ عَلَيْهِ وَسَـــلَّمَ وَهُـــوَ مُقِرٌّ بِالشَّـــهَادَتَيْنِ أُبِيـــحَ دَمُهُ. لِأَنَّـــهُ قَدْ تَرَكَ بِذَلِـــكَ دِينَهُ.

"ಧರ್ಮವನ್ನು ತ್ಯಜಿಸಿ ಸಮಾಜವನ್ನು ತೊರೆಯುವುದು ಎಂದರೆ ಇಸ್ಲಾಮ್ ಧರ್ಮವನ್ನು ಪರಿತ್ಯಾಗ ಮಾಡುವುದು. ಆತ ಸತ್ಯಸಾಕ್ಷ್ಯ-ವನ್ನು (ಕಲಿಮತೆ ಶಹಾದ)ಉಚ್ಚರಿಸಿದವನಾಗಿದ್ದರೂ ಸಹ (ಅವನು ಧರ್ಮಪರಿತ್ಯಾಗಿಯಾಗುತ್ತಾನೆ). ಸತ್ಯಸಾಕ್ಷ್ಯದಲ್ಲಿ ದೃಢವಾಗಿ ನೆಲೆನಿಂತಿರುವ ವ್ಯಕ್ತಿ ಅಲ್ಲಾಹನನ್ನು ಮತ್ತು ರಸೂಲರನ್ನು ನಿಂದಿಸಿದರೂ ಅವನನ್ನು ಕೊಲ್ಲಬೇಕು. ಏಕೆಂದರೆ ಆ ನಿಂದನೆಯ ಮೂಲಕ ಅವನು ಧರ್ಮವನ್ನು ತೊರೆದಿದ್ದಾನೆ." (ಜಾಮಿಉಲ್ ಉಲೂಮಿ ವಲ್ ಹಿಕಮ್ 1/318)

ಮೂಲ ಅವಿಶ್ವಾಸಿಗೆ (ಅಂದರೆ ಅವಿಶ್ವಾಸದಲ್ಲೇ ಹುಟ್ಟಿ ಬೆಳೆದವನಿಗೆ) ನೀಡುವ ಶಿಕ್ಷೆಗಿಂತಲೂ ಧರ್ಮಪರಿತ್ಯಾಗದ ಮೂಲಕ ಅವಿಶ್ವಾಸಿ-ಯಾದವನಿಗೆ ನೀಡುವ ಶಿಕ್ಷೆ ಕಠೋರವಾಗಿದೆ. ಈ ಕಾರಣದಿಂದಲೇ ಮೂಲ ಅವಿಶ್ವಾಸಿಯನ್ನು ಅವನ ಧರ್ಮದಲ್ಲೇ ಬಿಟ್ಟುಬಿಡುವ ಮತ್ತು ವಿದ್ವಾಂಸರು ಹೇಳುವ ಕೆಲವು ಪ್ರಸಿದ್ಧ ಷರತ್ತುಗಳ ಪ್ರಕಾರ ಅವನಿಗೆ ಜೀವದಾನ ಮಾಡುವ ಸಾಧ್ಯತೆಗಳಿವೆ. ಆದರೆ ಧರ್ಮಪರಿತ್ಯಾಗದ ಮೂಲಕ ಅವಿಶ್ವಾಸಿಯಾದವನು ಪಶ್ಚಾ-ತ್ತಾಪಪಟ್ಟು ಇಸ್ಲಾಮ್ ಧರ್ಮಕ್ಕೆ ಮರಳಿ ಬರದಿದ್ದರೆ ಅವನನ್ನು ಕೊಲ್ಲುವುದು ಕಡ್ಡಾಯವಾಗಿದೆ.

ಶೈಖುಲ್ ಇಸ್ಲಾಮ್ ಇಬ್ನ್ ತೈಮಿಯ್ಯ(ﷺ) ಹೇಳುತ್ತಾರೆ:

وَقَدِ اسْـــتَقَرَّتِ السُّـــنَّةُ بِأَنَّ عُقُوبَةَ الْمُرْتَـــدِّ أَعْظَمُ

مِـــنْ عُقُوبَةِ الْكَافِـــرِ الْأَصْلِيِّ مِنْ وُجُـــوهٍ مُتَعَدِّدَةٍ. مِنْهَا أَنَّ الْمُرْتَدَّ يُقْتَلُ بِـــكُلِّ حَالٍ، وَلَا يُضْرَبُ عَلَيْهِ جِزْيَةٌ وَلَا تُعْقَدُ لَهُ ذِمَّةٌ، بِخِـــلَافِ الْكَافِرِ الْأَصْلِيِّ. وَمِنْهَا أَنَّ الْمُرْتَدَّ يُقْتَـــلُ وَإِنْ كَانَ عَاجِزًا عَنِ الْقِتَالِ بِخِـــلَافِ الْكَافِـــرِ الْأَصْلِيِّ الَّـــذِي لَيْـــسَ هُوَ مِنْ أَهْـــلِ الْقِتَـــالِ. فَإِنَّـــهُ لَا يُقْتَلُ عِنْـــدَ أَكْثَـــرِ الْعُلَمَاءِ كَأَبِـــي حَنِيفَةَ وَمَالِـــكٍ وَأَحْمَدَ. وَمِنْهَـــا أَنَّ الْمُرْتَدَّ لَا يَـــرِثُ وَلَا يُنَاكِـــحُ وَلَا تُؤْكَلُ ذَبِيحَتُـــهُ بِخِلَافِ الْكَافِـــرِ الْأَصْلِيِّ.

“ಮೂಲ ಅವಿಶ್ವಾಸಿಗೆ ಸಿಗುವ ಶಿಕ್ಷೆಗಿಂತಲೂ ಧರ್ಮಪರಿತ್ಯಾಗ ಮಾಡಿ ಅವಿಶ್ವಾಸಿಯಾದವನಿಗೆ ಸಿಗುವ ಶಿಕ್ಷೆ ಅನೇಕ ವಿಧಗಳಿಂದ ಘೋರವಾಗಿದೆಯೆಂದು ಸುನ್ನತ್ತಿನಲ್ಲಿ ಸಾಬೀತಾಗಿದೆ. ಅವುಗಳಲ್ಲಿ ಕೆಲವು ಹೀಗಿವೆ: ಧರ್ಮಪರಿತ್ಯಾಗ ಮಾಡಿ ಅವಿಶ್ವಾಸಿಯಾದವ-ನನ್ನು ಯಾವುದೇ ಸ್ಥಿತಿಯಲ್ಲೂ ಕೊಲ್ಲಬೇಕು, ಅವನಿಂದ ಜಿಝ್ಯ ಪಡೆದು ಬಿಟ್ಟುಬಿಡಬಾರದು ಮತ್ತು ಅವನನ್ನು ದಿಮ್ಮಿಯೆಂದು ಪರಿಗಣಿಸಬಾರದು. ಆದರೆ ಮೂಲ ಅವಿಶ್ವಾಸಿಗೆ ಈ ವಿಧಿಗಳಿಲ್ಲ. ಧರ್ಮಪರಿತ್ಯಾಗ ಮಾಡಿ ಅವಿಶ್ವಾಸಿಯಾದವನು (ಮುಸ್ಲಿಮರ ವಿರುದ್ಧ) ಯುದ್ಧ ಮಾಡದಿದ್ದರೂ ಸಹ ಅವನನ್ನು ಕೊಲ್ಲಬೇಕು. ಆದರೆ ಮುಸ್ಲಿಮರ ವಿರುದ್ಧ ಯುದ್ಧ ಮಾಡದ ಅವಿಶ್ವಾಸಿಗೆ ಈ ವಿಧಿಯಿಲ್ಲ. ಅಬೂ ಹನೀಫ, ಮಾಲಿಕ್, ಅಹ್ಮದ್ ಮುಂತಾದ ಬಹುಪಾಲು ವಿದ್ವಾಂಸರ ಪ್ರಕಾರ ಅವರನ್ನು ಕೊಲ್ಲಬಾರದು. ಧರ್ಮಪರಿತ್ಯಾಗ ಮಾಡಿ ಅವಿಶ್ವಾಸಿಯಾದವನಿಗೆ ಉತ್ತರಾಧಿಕಾರದ-ಲ್ಲಿ ಪಾಲಿಲ್ಲ, ಅವನೊಂದಿಗೆ ವೈವಾಹಿಕ ಸಂಬಂಧ ಸ್ಥಾಪಿಸಬಾರದು ಮತ್ತು ಅವನು ಕೊಯ್ದ ಪ್ರಾಣಿಯ ಮಾಂಸ ತಿನ್ನಬಾರದು. ಆದರೆ ಮೂಲ ಅವಿಶ್ವಾಸಿಗಳಿಗೆ ಈ ವಿಧಿಗಳಿಲ್ಲ.” (ಮಜ್ಮೂಉಲ್ ಫತಾವಾ 28/534) ನೋಡಿ: ಅದ್ದುರರು ಸನಿಯ್ಯ 10/104.

ಎರಡನೆಯದಾಗಿ, ಅವಿಶ್ವಾಸಿಗಳೆಲ್ಲರೂ ಕೊಲೆಗೆ ಅರ್ಹರೇ? ಅವರಿಗೆ ಇಸ್ಲಾಮಿನ ಸಂದೇಶ ತಲುಪಿದರೂ ತಲುಪದಿ-ದ್ದರೂ ಅವರನ್ನು ಕೊಲ್ಲಬೇಕೇ? ಎನ್ನುವ ನಿಮ್ಮ ಪ್ರಶ್ನೆ. ಇದರ ಉತ್ತರ: ಇಲ್ಲ. ಎಲ್ಲ ಅವಿಶ್ವಾಸಿಗಳು (ಮುಸ್ಲಿಮೇತರರು) ಕೊಲೆಗೆ ಅರ್ಹರಲ್ಲ. ವಾಸ್ತವವಾಗಿ, ಅವಿಶ್ವಾಸಿಗಳನ್ನು ಎರಡು ವರ್ಗಗಳಾಗಿ ವಿಂಗಡಿಸಲಾಗಿದೆ.

ಮೊದಲನೇ ವರ್ಗದವರು: ಪ್ರಾಣ ಮತ್ತು ಸೊತ್ತಿನ ಸಂರಕ್ಷಣೆಯ ಕರಾರು ಮಾಡಿಕೊಂಡವರು. ಇವರ ಮೇಲೆ ಆಕ್ರಮಣ ಸಲ್ಲದು. ಇವರಲ್ಲಿ ಮೂರು ವಿಧಗಳಿವೆ.

ಒಂದು: ಕರಾರು ಮಾಡಿಕೊಂಡವರು. ಅಂದರೆ ಯುದ್ಧ ಮಾಡು-ವುದಿಲ್ಲವೆಂದು ಅವಿಶ್ವಾಸಿಗಳು ಮತ್ತು ಮುಸ್ಲಿಮರು ಪರಸ್ಪರ ಕರಾರು ಮಾಡಿಕೊಂಡಿದ್ದರೆ ಅವರನ್ನು ಕೊಲ್ಲಬಾರದು. ಉದಾಹರಣೆಗೆ, ಪ್ರವಾದಿಯವರು(ﷺ) ಹುದೈಬಿಯಾ ಕರಾರಿನ ಮೂಲಕ ಮಕ್ಕಾ ಅವಿಶ್ವಾಸಿಗಳೊಂದಿಗೆ ಹತ್ತು ವರ್ಷಗಳ ಕಾಲ ಯುದ್ಧ ವಿರಾಮದ ಕರಾರು ಮಾಡಿಕೊಂಡಿದ್ದರು.

ಎರಡು: ದಿಮ್ಮಿಗಳು. ಇವರು ಮುಸ್ಲಿಂ ದೇಶಗಳಲ್ಲಿ ಜೀವಿಸುವ ಮುಸ್ಲಿಮೇತರ ಪ್ರಜೆಗಳು. ಇವರು ಮುಸ್ಲಿಮರೊಂದಿಗೆ ಕರಾರಿನಲ್ಲಿರುವವರಾಗಿದ್ದಾರೆ.

ಮೂರು: ಸಂರಕ್ಷಣೆ ಪಡೆದವರು. ಇವರು ವ್ಯಾಪಾರ ಮುಂತಾದ ಉದ್ದೇಶದಿಂದ ಸಂರಕ್ಷಣೆಯ ಕರಾರಿನೊಂದಿಗೆ ಮುಸ್ಲಿಂ ದೇಶವನ್ನು ಪ್ರವೇಶಿಸುವ ಅವಿಶ್ವಾಸಿಗಳು. ಮುಸ್ಲಿಂ ಆಡಳಿತ ಇವರಿಗೆ ಕೊಡುವ ವೀಸಾ ಇವರಿಗೆ ಯಾವುದೇ ತೊಂದರೆ ಅಥವಾ ಅನ್ಯಾಯ-ವಾಗದಂತೆ ನೋಡಿಕೊಳ್ಳಲಾಗುವುದು ಎನ್ನುವ ಸಂರಕ್ಷಣೆಯ ಕರಾರೆಂದು ಪರಿಗಣಿಸಲಾಗುತ್ತದೆ.

ಎರಡನೇ ವರ್ಗದವರು: ಮುಸ್ಲಿಮರೊಂದಿಗೆ ಯುದ್ಧ ನಿರತ-ರಾಗಿರುವವರು. ಇವರ ಮತ್ತು ಮುಸ್ಲಿಮರ ಮಧ್ಯೆ ಯಾವುದೇ ಕರಾರು, ಸಂರಕ್ಷಣೆಯ ಹೊಣೆಗಾರಿಕೆಯಿಲ್ಲ. ಕೊಲೆಗೆ ಅರ್ಹರೆಂದು ಹೇಳಿರುವುದು ಇವರನ್ನಾಗಿದೆ.

ಅಲ್ಲಾಹು(ﷻ) ಹೇಳುತ್ತಾನೆ:

﴿وَلَا تَقْتُلُوا النَّفْسَ الَّتِي حَرَّمَ اللَّهُ إِلَّا بِالْحَقِّ﴾

“ಅಲ್ಲಾಹು ನಿಷಿದ್ಧಗೊಳಿಸಿದ ಶರೀರವನ್ನು ನ್ಯಾಯಯುತವಾಗಿಯ-ಲ್ಲದೆ ಕೊಲ್ಲಬಾರದು.” (6:151)

ಈ ಆಯತ್ತನ್ನು ವ್ಯಾಖ್ಯಾನಿಸುತ್ತಾ ಇಮಾಮ್ ಅಲ್‌ಕುರ್ತುಬಿ(رحمه الله) ಹೇಳುತ್ತಾರೆ:

جِزْيَةٍ أَوْ هُدْنَةٍ مِنْ سُــلْطَانٍ أَوْ أَمَانٍ مِنْ مُسْلِمٍ.

“ಕರಾರಿನಲ್ಲಿರುವ ಅವಿಶ್ವಾಸಿಗಳು ಎಂದರೆ ಮುಸ್ಲಿಮರೊಂದಿಗೆ ಕರಾರು ಮಾಡುಕೊಂಡ ಅವಿಶ್ವಾಸಿಗಳು. ಅಂದರೆ ಜಿಝ್ಯ ನೀಡುವ ಮೂಲಕ, ಅಥವಾ ತಾತ್ಕಾಲಿಕ ಕದನ ವಿರಾಮದ ಮೂಲಕ, ಅಥವಾ ಮುಸಲ್ಮಾನನೊಬ್ಬ ನೀಡಿದ ಅಭಯಾಶ್ರಯದ ಮೂಲಕ ಸಂರಕ್ಷಣೆಯಲ್ಲಿರುವವರು.” (ಫತ್‌ಹುಲ್ ಬಾರಿ 12/259)

ಮೂರನೆಯದಾಗಿ, ಧರ್ಮಪರಿತ್ಯಾಗಿಯ ಮೇಲೆ ಅಥವಾ ಕರಾರನ್ನು ಉಲ್ಲಂಘಿಸಿದ ಅವಿಶ್ವಾಸಿಯ ಮೇಲೆ ಶಿಕ್ಷೆಯನ್ನು ಜಾರಿಗೊಳಿಸಬೇಕಾದ ಅಧಿಕಾರವಿರುವುದು ಆ ದೇಶದ ಆಡಳಿತಗಾರನಿಗೆ ಮಾತ್ರ. ಜನಸಾಮಾನ್ಯರಿಗೆ ಆ ಅಧಿಕಾರವಿಲ್ಲ. ಕಾರಣ, ಇದು ಅರಾಜಕತೆ ಮತ್ತು ಕ್ಷೋಭೆಗೆ ಎಡೆ ಮಾಡಿಕೊಡುತ್ತದೆ.

ಧರ್ಮಪರಿತ್ಯಾಗಿಯ ಬಗ್ಗೆ ವಿವರಿಸುತ್ತಾ ಇಬ್ನುಲ್ ಮುಫ್ಲಿಹ್(ﷺ) ಹೇಳುತ್ತಾರೆ:

لَا يَقْتُلُهُ إِلَّا الْإِمَــامُ أَوْ نَائِبُهُ حُــرًّا كَانَ أَوْ عَبْدًا فِي قَوْلِ عَامَّــةِ الْعُلَمَاءِ.

“ಬಹುಸಂಖ್ಯಾತ ವಿದ್ವಾಂಸರ ಅಭಿಪ್ರಾಯ ಪ್ರಕಾರ ಅವನನ್ನು (ಧರ್ಮಪರಿತ್ಯಾಗಿಯನ್ನು) ಕೊಲ್ಲುವ ಅಧಿಕಾರವಿರುವುದು ರಾಷ್ಟ್ರ ನಾಯಕನಿಗೆ ಅಥವಾ ಅವನು ನೇಮಿಸುವ ಪ್ರತಿನಿಧಿಗೆ ಮಾತ್ರ. ಆತ ಸ್ವತಂತ್ರನಾಗಿದ್ದರೂ ಅಥವಾ ಗುಲಾಮನಾಗಿದ್ದರೂ ಸರಿ.” (ಅಲ್‌ಮುಬ್ದಿಅ್ 9/175). ನೋಡಿ: ಅದ್ದುರರು ಸನಿಯ್ಯ 10/394–395.

ಶೈಖ್ ಇಬ್ನ್ ಉಸೈಮೀನ್(ﷺ) ಹೇಳುತ್ತಾರೆ:

وَلَا يَحِلُّ لِأَحَــدٍ قَتْلُهُ مَعَ أَنَّهُ مُبَاحُ الــدَّمِ. لِأَنَّ فِي قَتْلِهِ افْتِيَاتًا عَلَــى وَلِيِّ الْأَمْرِ. وَلِأَنَّ فِي قَتْلِهِ سَــبَبًا لِلْفَوْضَى بَيْــنَ النَّاسِ... وَلِهَــذَا لَا يَتَوَلَّى قَتْلَهُ إِلَّا الْإِمَامُ أَوْ نَائِبُهُ.

“ಆತ (ಧರ್ಮಪರಿತ್ಯಾಗಿ) ಕೊಲೆಗೆ ಅರ್ಹನಾಗಿದ್ದರೂ ಸಹ

*23 ನೇ ಪುಟಕ್ಕೆ*

وَهَذِهِ الْآيَةُ نَهْيٌ عَنْ قَتْلِ النَّفْــسِ الْمُحَرَّمَةِ، مُؤْمِنَةً كَانَتْ أَوْ مُعَاهَــدَةً، إِلَّا بِالْحَقِّ الَّذِي يُوجِبُ قَتْلَهَا.

“ಅಲ್ಲಾಹು ಕೊಲ್ಲುವುದನ್ನು ನಿಷಿದ್ಧಗೊಳಿಸಿದ ಮನುಷ್ಯ ಶರೀರವನ್ನು ಕೊಲ್ಲುವುದನ್ನು ಈ ಆಯತ್ ವಿರೋಧಿಸುತ್ತದೆ. ಅದು ವಿಶ್ವಾಸಿಯಾಗಿದ್ದರೂ ಅಥವಾ ಕರಾರಿನಲ್ಲಿರುವ ಅವಿಶ್ವಾಸಿಯಾಗಿದ್ದರೂ ಸಹ ಅವರನ್ನು ಕೊಲ್ಲಬಾರದು. ಕೊಲ್ಲುವುದನ್ನು ಅನುಮತಿಸುವ ನ್ಯಾಯಯುತ ಕಾರಣದಿಂದಲ್ಲದೆ.” (ಅಲ್‌ಜಾಮಿಉ ಲಿಅಹ್ಕಾಮಿಲ್ ಕುರ್‌ಆನ್ 7/134) ನೋಡಿ: ತಫ್ಸೀರ್ ಇಬ್ನ್ ಕಸೀರ್ 2/190.

ಶೈಖ್ ಅಸ್ಸಅ್‌ದೀ(ﷺ) ಹೇಳುತ್ತಾರೆ:

وَهِيَ النَّفْسُ الْمُسْــلِمَةُ مِــنْ ذَكَرٍ وَأُنْثَــى، صَغِيرٍ وَكَبِيرٍ، بَــرٍّ وَفَاجِــرٍ، وَالْكَافِرَةُ الَّتِي قَــدْ عَصَمَتْ بِالْعَهْــدِ وَالْمِيثَاقِ.

“ಅಲ್ಲಾಹು ನಿಷಿದ್ಧಗೊಳಿಸಿದ ಶರೀರ ಅಂದರೆ ಮುಸಲ್ಮಾನನ ಶರೀರ. ಅದು ಗಂಡಾಗಿದ್ದರೂ, ಹೆಣ್ಣಾಗಿದ್ದರೂ, ಕಿರಿಯನಾಗಿದ್ದರೂ, ಹಿರಿಯನಾಗಿದ್ದರೂ, ಶಿಷ್ಟನಾಗಿದ್ದರೂ, ದುಷ್ಟನಾಗಿದ್ದರೂ ಸರಿ. ಅದೇ ರೀತಿ ಕರಾರುಗಳ ಮೂಲಕ ತನ್ನನ್ನು ಸಂರಕ್ಷಿಸಿಕೊಂಡ ಅವಿಶ್ವಾಸಿಯ ಶರೀರ.” (ತೈಸೀರುಲ್ ಕರೀಮಿ ರ್‍ರಹ್ಮಾನ್ ಪುಟ 257)

ಪ್ರವಾದಿಯವರು(ﷺ) ಹೇಳುತ್ತಾರೆ:

«مَــنْ قَتَلَ مُعَاهَــدًا لَمْ يَــرِحْ رَائِحَةَ الْجَنَّــةِ، وَإِنَّ رِيحَهَا تُوجَــدُ مِنْ مَسِــيرَةِ أَرْبَعِيــنَ عَامًا».

“ಕರಾರಿನಲ್ಲಿರುವ ಅವಿಶ್ವಾಸಿಯನ್ನು ಕೊಲ್ಲುವವರು ಸ್ವರ್ಗದ ಪರಿಮಳವನ್ನೂ ಅನುಭವಿಸಲಾರರು. ಸ್ವರ್ಗದ ಪರಿಮಳವು ನಲ್ವತ್ತು ವರ್ಷದಷ್ಟು ದೂರದಿಂದಲೇ ಅನುಭವವಾಗುತ್ತದೆ.” (ಅಲ್‌ಬುಖಾರಿ 3166)

ಹಾಫಿಝ್ ಇಬ್ನ್ ಹಜರ್(ﷺ) ಹೇಳುತ್ತಾರೆ:

وَالْمُرَادُ بِهِ مَنْ لَهُ عَهْدٌ مَعَ الْمُسْــلِمِينَ، سَوَاءً بِعَقْدِ

# ಅಲ್ಲಾಹನ ನಾಮ ಮತ್ತು ವಿಶೇಷಣಗಳು

ವರ್ಣಿಸಲ್ಪಡುವುದರ ರೂಪ ಹೇಗಿದೆಯೆಂದು ವಿವರಿಸಲು ಅಸಾಧ್ಯವಾಗಿರುವಾಗ, ಅದರ ವಿಶೇಷಣಗಳ ರೂಪವನ್ನು ತಿಳಿಯಲೂ ಸಾಧ್ಯವಿಲ್ಲ. ಅಲ್ಲಾಹನ ಸತ್ತೆ (ಝಾತ್) ಹೇಗಿದೆಯೆಂದು ತಿಳಿಯದವನು ಅವನ ವಿಶೇಷಣ ಹೇಗಿದೆಯೆಂದು ಪ್ರಶ್ನಿಸುವುದರಲ್ಲಿ ಅರ್ಥವಿಲ್ಲ.

ಅಲ್ಲಾಹನಿಗಿರುವುದಾಗಿ ಅಲ್ಲಾಹನು ಮತ್ತು ಪ್ರವಾದಿ(ﷺ) ರವರು ತಿಳಿಸಿಕೊಟ್ಟಿರುವ ಯಾವುದೇ ನಾಮ ಮತ್ತು ವಿಶೇಷಣವನ್ನು ನಾವು ನಿಷೇಧಿಸಬಾರದು. ಏಕೆಂದರೆ ಅಲ್ಲಾಹನ ಕುರಿತು ಅತ್ಯಧಿಕ ಜ್ಞಾನವಿರುವವನು ಸ್ವಯಂ ಅಲ್ಲಾಹನಾಗಿದ್ದಾನೆ. ಸೃಷ್ಟಿಗಳ ಪೈಕಿ ಅಲ್ಲಾಹನ ಬಗ್ಗೆ ಹೆಚ್ಚು ಅರಿತವರು ಪ್ರವಾದಿ(ﷺ) ರವರಾಗಿದ್ದಾರೆ. ಆದುದರಿಂದ ಅಲ್ಲಾಹ್ ಮತ್ತು ಅವನ ಸಂದೇಶವಾಹಕರು ತಿಳಿಸಿಕೊಟ್ಟಿರುವ ಕಾರ್ಯಗಳನ್ನು ನಿಷೇಧಿಸುವುದು ಸತ್ಯನಿಷೇಧವಾಗಿದೆ.

ಅಲ್ಲಾಹನ ಗುಣನಾಮ ಮತ್ತು ವಿಶೇಷಣಗಳ ವಿಷಯದಲ್ಲಿ ಜಹ್ಮಿಯ್ಯಗಳಿಗೆ ಭಾರೀ ಪ್ರಮಾದ ಸಂಭವಿಸಿತ್ತು. ಅವರು ಅಲ್ಲಾಹನ ಸ್ವಿಫಾತ್ (ವಿಶೇಷಣಗಳು)ಗಳನ್ನು ನಿಷೇಧಿಸಿದರು. ಅವರು ತಮ್ಮ ಸೀಮಿತ ಬುದ್ಧಿಯನ್ನು ಆಧಾರವಾಗಿಟ್ಟುಕೊಂಡು ಅಲ್ಲಾಹನು ಯಾರಾಗಿರಬೇಕೆಂದು ಸ್ವಯಂ ತೀರ್ಮಾನಿಸಿದರು. ಅನಂತರ ಆಗಮಿಸಿದ ಮುಅ್‌ತಝಿಲ ವಿಭಾಗವು ಕೂಡಾ ಪ್ರಮಾಣಗಳನ್ನು ಸ್ವೀಕರಿಸುವ ಬದಲು ತಮ್ಮ ಬುದ್ಧಿ ಪ್ರಮಾದ ಮುಕ್ತವೆಂದು ಪರಿಗಣಿಸಿ ಅದಕ್ಕೆ ಪ್ರಾಮುಖ್ಯತೆ ನೀಡುವ ನಿಲುವನ್ನು ಸ್ವೀಕರಿಸಿತು. ಇವರೆಲ್ಲರೂ ಅಲ್ಲಾಹನಿಗೆ ಯಾವೆಲ್ಲ ವಿಶೇಷಣಗಳಿರಬೇಕು ಮತ್ತು ಇರಬಾರದು ಎನ್ನುವುದನ್ನು ತೀರ್ಮಾನಿಸಲು ಪ್ರಮಾಣಗಳನ್ನು ತೊರೆದು ಸಂಶೋಧನೆಗಳ ಮೊರೆ ಹೋದರು.

ಅವರು ಅಲ್ಲಾಹ್ ಮತ್ತು ಪ್ರವಾದಿ(ﷺ) ರವರು ಅಲ್ಲಾಹನಿಗಿದೆಯೆಂದು ತಿಳಿಸಿಕೊಟ್ಟ ವಿಶೇಷಣಗಳನ್ನು ನಾವು ಅಂಗೀಕರಿಸಿದರೆ ಅದು ಅಲ್ಲಾಹನನ್ನು ಸೃಷ್ಟಿಗಳಿಗೆ ಹೋಲಿಸುವ ತೌಹೀದಿಗೆ ವಿರುದ್ಧವಾದ ನಡವಳಿಕೆಯಾಗುತ್ತದೆ ಎಂದು ವಾದಿಸಿದರು. ಆದರೆ ಇವರೆಲ್ಲರೂ ಅಲ್ಲಾಹನ ಅಸ್ತಿತ್ವವನ್ನು ಅಂಗೀಕರಿಸುವವರಾಗಿದ್ದರು. ಸೃಷ್ಟಿಗಳ ಅಸ್ತಿತ್ವವನ್ನೂ ಅಂಗೀಕರಿಸುತ್ತಾರೆ. ಹೀಗಿರುವಾಗ ಮೇಲೆ ವಿವರಿಸಿದ ಹೋಲಿಕೆ ಇಲ್ಲಿಯೂ ಅನ್ವಯವಾಗುವುದಿಲ್ಲವೇ ಎಂದು ಕೇಳಿದರೆ, ಸೃಷ್ಟಿಗಳ ಅಸ್ತಿತ್ವ ಅಲ್ಲಾಹನ ಅಸ್ತಿತ್ವದಂತಲ್ಲ ಎನ್ನುವುದೇ ಸರಿಯಾದ ಉತ್ತರವಾಗಿದೆ. ಹಾಗಿದ್ದರೆ ನಾವು ಅಲ್ಲಾಹನ ವಿಶೇಷಣಗಳ ಕಾರ್ಯದಲ್ಲಿಯೂ ಇವರೊಂದಿಗೆ ಇದನ್ನೇ ಹೇಳಬೇಕಾಗುತ್ತದೆ. ಅಲ್ಲಾಹನಂತಿರುವುದು ಯಾವುದೂ ಇಲ್ಲ. ಅಲ್ಲಾಹನು ಹೇಳುತ್ತಾನೆ:

﴿فَاطِرُ ٱلسَّمَٰوَٰتِ وَٱلْأَرْضِ ۚ جَعَلَ لَكُم مِّنْ أَنفُسِكُمْ أَزْوَٰجًا وَمِنَ ٱلْأَنْعَٰمِ أَزْوَٰجًا ۖ يَذْرَؤُكُمْ فِيهِ ۚ لَيْسَ كَمِثْلِهِۦ شَىْءٌ ۖ وَهُوَ ٱلسَّمِيعُ ٱلْبَصِيرُ ١١﴾

“ಅವನು ಆಕಾಶಗಳು ಮತ್ತು ಭೂಮಿಯ ನಿರ್ಮಾಪಕ. ಅವನು ನಿಮ್ಮ ವರ್ಗದಿಂದಲೇ ನಿಮಗಾಗಿ ಜೊತೆಗಳನ್ನು ಸೃಷ್ಟಿಸಿದನು. ಹಾಗೆಯೇ ಪ್ರಾಣಿಗಳಲ್ಲೂ ಜೋಡಿಗಳನ್ನು ಉಂಟು ಮಾಡಿದನು. ಈ ರೀತಿಯಲ್ಲಿ ಅವನು ನಿಮ್ಮ ಸಂತತಿಗಳನ್ನು ಹಬ್ಬಿಸುತ್ತಾನೆ. ವಿಶ್ವದ

ಯಾವ ವಸ್ತುವೂ ಅವನನ್ನು ಹೋಲುವುದಿಲ್ಲ. ಅವನು ಎಲ್ಲವನ್ನೂ ಆಲಿಸುವವನೂ ವೀಕ್ಷಿಸುವವನೂ ಆಗಿರುತ್ತಾನೆ.” (42:11)

ಅಲ್ಲಾಹನ ಅನೇಕ ಸ್ವಿಫಾತ್‌ಗಳ ಪೈಕಿ ಕೇವಲ ಆರೇಳನ್ನು ಮಾತ್ರ ಅಂಗೀಕರಿಸಿ ಉಳಿದವುಗಳನ್ನೆಲ್ಲ ಮುಅ್‌ತಝಿಲಗಳು ಮಾಡಿದಂತೆ ವ್ಯಾಖ್ಯಾನಿಸಿ ಅಥವಾ ಆ ಕುರಿತು ಏನನ್ನು ಹೇಳದೆ ಅಲ್ಲಾಹನಿಗೆ ಬಿಟ್ಟುಬಿಟ್ಟ (ತಫ್ವೀಳ್ ಮತ್ತು ತಅ್‌ವೀಳ್‌ನ ವಕ್ತಾರರಾದ) ಅಶ್‌ಅರಿ–ಮಾತುರೀದಿ ವಿಭಾಗವು ಕೂಡಾ ಒಂದೇ ಹೊಂಡದಲ್ಲಿ ಬಿದ್ದು ಬಿಟ್ಟಿತು.

ಜಹ್ಮಿಯ್ಯ ಮತ್ತು ಮುಅ್‌ತಝಿಲಿಗಳೊಂದಿಗೆ ಹೇಳಿದಂತೆ ಅಹ್ಲ್ ಸುನ್ನತ್‌ಗೆ ಇವರೊಂದಿಗೆ ಹೇಳಲಿಕ್ಕಿರುವುದು ಇಷ್ಟು: ನೀವು ಅಲ್ಲಾಹನ ಏಳು ಸ್ವಿಫಾತ್‌ಗಳನ್ನು ಅಂಗೀಕರಿಸಿ ಉಳಿದವುಗಳನ್ನು ನಿರಾಕರಿಸುತ್ತೀರಿ. ಅಲ್ಲಾಹನ ಜ್ಞಾನ, ಶಕ್ತಿ, ಆಲಿಸುವಿಕೆ ಮತ್ತು ವೀಕ್ಷಿಸುವಿಕೆ ನೀವು ಅಂಗೀಕರಿಸುವ ಸ್ವಿಫಾತ್‌ಗಳಾಗಿವೆ. ಆದರೆ ಸೃಷ್ಟಿಗಳಿಗೂ ಜ್ಞಾನ, ಶಕ್ತಿ, ಆಲಿಸುವಿಕೆ ಮತ್ತು ವೀಕ್ಷಿಸುವಿಕೆಯ ಸಾಮರ್ಥ್ಯವಿದೆಯಲ್ಲ ಎಂದು ಕೇಳಿದಾಗ, ಅಲ್ಲಾಹನ ಜ್ಞಾನ, ಸಾಮರ್ಥ್ಯ, ಆಲಿಸುವಿಕೆ ಮತ್ತು ವೀಕ್ಷಿಸುವಿಕೆ ಸೃಷ್ಟಿಗಳಂತಲ್ಲ ಎನ್ನುವುದು ಉತ್ತರವಾಗಿದೆ. ಹೀಗಿರುವಾಗ ಪ್ರಮಾಣಗಳು ನಮಗೆ ತಿಳಿಸಿಕೊಟ್ಟಿರುವ ಉಳಿದಿರುವ ಸ್ವಿಫಾತ್‌ಗಳ ಕಾರ್ಯದಲ್ಲಿಯೂ ಅವುಗಳಾವುದೂ ಸೃಷ್ಟಿಗಳ ವಿಶೇಷಣಗಳಂತಲ್ಲ, ಬದಲಾಗಿ ಅವುಗಳು ಅವನ ಮಹತ್ವ ಮತ್ತು ಔನ್ನತ್ಯಕ್ಕೆ ಭೂಷಣವಾದ ವಿಧದಲ್ಲಿ ಪರಿಪೂರ್ಣವಾಗಿದೆ. ಇದು ಪ್ರಮಾಣಗಳಿಂದ ಅಂಗೀಕೃತವಾದ ತತ್ವವಾಗಿದೆ. ಅವುಗಳನ್ನು ಪರಿಮಿತ ಬುದ್ಧಿಯಿಂದ ವ್ಯಾಖ್ಯಾನಿಸುವುದಾಗಲೀ ನಿಷೇಧಿಸುವುದಾಗಲೀ ಸಲ್ಲದು.

ಪ್ರಸ್ತುತ ಕಾರ್ಯಗಳಲ್ಲಿ ನಮಗಿರುವ ಆದರ್ಶ ಮತ್ತು ಪೂರ್ವಿಕರು ಯಾರು ಎಂದು ಸರಿಯಾಗಿ ತಿಳಿಯಲು ಕೂಡಾ ಅವರಿಗೆ ಸಾಧ್ಯವಾಗುವುದಿಲ್ಲ. ಅವರು ತಮ್ಮ ವಾದಕ್ಕೆ ಪುರಾವೆಯಾಗಿ ಪ್ರವಾದಿ (ﷺ), ಸ್ವಹಾಬಿಗಳು, ತಾಬಿಉಗಳು, ತಾಬಿಉತ್ತಾಬಿಉಗಳನ್ನೊಳಗೊಂಡ ಸಲಫುಗಳಲ್ಲಿ ಯಾರನ್ನೂ ಆದರ್ಶವನ್ನಾಗಿ ಉಲ್ಲೇಖಿಸಲು ಸಾಧ್ಯವಾಗದು ಎನ್ನುವುದನ್ನು ನಾವು ತಿಳಿದಿರಬೇಕಾಗಿದೆ. ಅವರು ನಮ್ಮ ಸಚ್ಚರಿತರಾದ ಪೂರ್ವಿಕರಾಗಿದ್ದಾರೆ. ಅವರನ್ನು ಅನುಸರಿಸಬೇಕೆಂದು ನಮಗೆ ಆದೇಶಿಸಲಾಗಿದೆ.

**ಇವರ ವ್ಯಾಖ್ಯಾನದ ಅಪಾಯಗಳು:**

1. ಇಂತಹ ವ್ಯಾಖ್ಯಾನಗಳಿಂದ ನಾವು ಅಲ್ಲಾಹನ ಕುರಿತು ಸ್ಪಷ್ಟವಾಗಿ ತಿಳಿದಿರದ ಕಾರ್ಯಗಳನ್ನು ವಿವರಿಸುವ ಪ್ರಮಾದ ಸಂಭವಿಸುತ್ತದೆ. ಹೀಗೆ ಮಾಡುವುದನ್ನು ಅಲ್ಲಾಹನು ನಮಗೆ ಪ್ರಬಲವಾಗಿ ವಿರೋಧಿಸಿದ್ದಾನೆ.

﴿ وَقَالُوا۟ لَن تَمَسَّنَا ٱلنَّارُ إِلَّآ أَيَّامًا مَّعْدُودَةً ۚ قُلْ أَتَّخَذْتُمْ عِندَ ٱللَّهِ عَهْدًا فَلَن يُخْلِفَ ٱللَّهُ عَهْدَهُۥٓ ۖ أَمْ تَقُولُونَ عَلَى ٱللَّهِ مَا لَا تَعْلَمُونَ ﴿٨٠﴾ ﴾

“ಅವರು (ಯಹೂದ್ಯರು) ಹೇಳುತ್ತಾರೆ: ನಮಗೆ ಸಿಕ್ಕಿದರೂ ಕೆಲವೇ ದಿನಗಳ ಶಿಕ್ಷೆ ಸಿಗಬಹುದಷ್ಟೆ ಹೊರತು ನರಕಾಗ್ನಿಯು ನಮ್ಮನ್ನು ಎಂದೂ ಬಾಧಿಸದು. ಅವರೊಡನೆ ಕೇಳಿರಿ: ಅಲ್ಲಾಹನಿಗೆ ಉಲ್ಲಂಘಿಸಲಾಗದಂತಹ ಕರಾರನ್ನೇನಾದರೂ ನೀವು ಅವನಿಂದ ಪಡೆದುಕೊಂಡಿರುತ್ತೀರಾ? ಅಥವಾ ನಿಮಗೆ ತಿಳಿಯದ ವಿಷಯವನ್ನು ನೀವು ಅಲ್ಲಾಹನ ಮೇಲೆ ಹೊರಿಸಿ ಹೇಳುತ್ತಿರುವಿರಾ?” (2:80)

﴿ وَمَنْ أَظْلَمُ مِمَّنِ ٱفْتَرَىٰ عَلَى ٱللَّهِ كَذِبًا ۚ أُو۟لَـٰٓئِكَ يُعْرَضُونَ عَلَىٰ رَبِّهِمْ وَيَقُولُ ٱلْأَشْهَـٰدُ هَـٰٓؤُلَآءِ ٱلَّذِينَ كَذَبُوا۟ عَلَىٰ رَبِّهِمْ ۚ أَلَا لَعْنَةُ ٱللَّهِ عَلَى ٱلظَّـٰلِمِينَ ﴿١٨﴾ ﴾

“ಅಲ್ಲಾಹನ ಮೇಲೆ ಸುಳ್ಳಾರೋಪ ಹೊರಿಸುವವನಿಗಿಂತ ಹಿರಿಯ ಅಕ್ರಮಿ ಇನ್ನಾರಿರಬಹುದು? ಇಂತಹವರು ತಮ್ಮ ಪ್ರಭುವಿನ ಮುಂದೆ ತರಲ್ಪಡುವರು ಮತ್ತು ತಮ್ಮ ಪ್ರಭುವಿನ ಮೇಲೆ ಸುಳ್ಳಾರೋಪ ಹೊರಿಸಿದವರು ಇವರೇ ಎಂದು ಸಾಕ್ಷಿದಾರರು ಹೇಳುವರು. ಕೇಳಿರಿ: ಅಕ್ರಮಿಗಳ ಮೇಲೆ ಅಲ್ಲಾಹನ ಶಾಪವಿದೆ.” (11:18)

﴿ قَالَ لَهُم مُّوسَىٰ وَيْلَكُمْ لَا تَفْتَرُوا۟ عَلَى ٱللَّهِ كَذِبًا فَيُسْحِتَكُم بِعَذَابٍ ۖ وَقَدْ خَابَ مَنِ ٱفْتَرَىٰ ﴿٦١﴾ ﴾

"ಮೂಸಾ ಅವರೊಂದಿಗೆ ಹೇಳಿದರು: ಹತಭಾಗ್ಯರೇ! ಅಲ್ಲಾಹನ ಮೇಲೆ ಸುಳ್ಳಾರೋಪ ಹೊರಿಸಬೇಡಿರಿ. ಅನ್ಯಥಾ ಅವನೊಂದು ಘೋರ ಯಾತನೆಯ ಮೂಲಕ ನಿಮ್ಮನ್ನು ಸರ್ವನಾಶಗೊಳಿಸಿ ಬಿಡುವನು. ಮಿಥ್ಯಾರೋಪವನ್ನು ಯಾರೇ ಹೊರಿಸಲಿ ಅವನು ನಾಶವಾದನು." (20:61)

ಸ್ಪಷ್ಟವಾದ ತಿಳುವಳಿಕೆಯಿಲ್ಲದೆ ಯಾರ ಕುರಿತು ಏನನ್ನೂ ಹೇಳಬಾರದು. ಹೀಗಿರುವಾಗ ಅದು ಅಲ್ಲಾಹನ ಕುರಿತು ಸಂಭವಿಸಿದರೆ ಅದೆಷ್ಟು ಅಪಾಯಕಾರಿಯಾಗುತ್ತದೆ.

﴿ وَلَا تَقْفُ مَا لَيْسَ لَكَ بِهِۦ عِلْمٌ ۚ إِنَّ ٱلسَّمْعَ وَٱلْبَصَرَ وَٱلْفُؤَادَ كُلُّ أُو۟لَٰٓئِكَ كَانَ عَنْهُ مَسْـُٔولًا ٣٦ ﴾

"ನಿಮಗೆ ಜ್ಞಾನವಿಲ್ಲದಂತಹ ವಸ್ತುಗಳನ್ನು ಬೆಂಬತ್ತಬೇಡಿರಿ. ನಿಶ್ಚಯವಾಗಿಯೂ ಶ್ರವಣ, ದೃಷ್ಟಿ ಮತ್ತು ಮನಸ್ಸು ಇವೆಲ್ಲ-ವುಗಳ ವಿಚಾರಣೆ ನಡೆಯಲಿದೆ." (17:36)

2. ನಾವು ಉತ್ತಮವೆಂದು ಭಾವಿಸುವ ವ್ಯಾಖ್ಯಾನಗಳು ನಿಜವಾಗಿಯೂ ಉತ್ತಮ ಹಾಗೂ ಅದು ಅನಿವಾರ್ಯವಾ-ಗಿರುತ್ತಿದ್ದರೆ ಅಲ್ಲಾಹು ಮತ್ತು ಅವನ ಸಂದೇಶವಾಹಕರು ನಮಗೆ ಅದನ್ನು ತಿಳಿಸಿಕೊಡುತ್ತಿದ್ದರು. ಇದಕ್ಕಿಂತ ನಿಸ್ಸಾರವಾದ ವಿಷಯಗಳನ್ನು ವಿವರವಾಗಿ ತಿಳಿಸಿಕೊಟ್ಟಿರುವ ಧಾರ್ಮಿಕ ಪ್ರಮಾಣಗಳು ಮೌಲಿಕವಾದ ಈ ವಿಶ್ವಾಸ ಕಾರ್ಯವನ್ನು ವಿವರಿಸದೆ ನಿರ್ಲಕ್ಷಿಸಲು ಕಾರಣವೇನು? ಆದುದರಿಂದ ನಾವು ಸ್ವಂತವಾಗಿ ಪ್ರಸ್ತುತಪಡಿಸುವ ವ್ಯಾಖ್ಯಾನಗಳು ಧರ್ಮದಲ್ಲಿ ಮಾಡುವ ನೂತನ ಸೇರ್ಪಡೆಯಾಗುತ್ತದೆ.

3. ಸಲಫ್‌ಗಳ ಪೈಕಿ ಯಾರಿಂದಲೂ ಇಂತಹ ವ್ಯಾಖ್ಯಾನಗಳು ಉಲ್ಲೇಖಿಸಲ್ಪಟ್ಟಿಲ್ಲ ಎನ್ನುವುದು ಗಮನಾರ್ಹವಾಗಿದೆ. ಹೀಗಿರುವಾಗ ಅಲ್ಲಾಹನು ಉತ್ತಮ ತಲೆಮಾರಿನವರಾದ ಹಾಗೂ ಸ್ವಚ್ಛ ಅರಬಿ ಭಾಷೆಯವರಾದ ಸಚ್ಚರಿತರ ಪಥವನ್ನು ತೊರೆದು ಸ್ವೀಕರಿಸುವ ವ್ಯಾಖ್ಯಾನವು ಕುರ್‌ಆನ್ ಮತ್ತು ಸುನ್ನತ್ ನಮ್ಮೊಂದಿಗೆ ಆದೇಶಿಸಿದ ಪಥವನ್ನು ಕೈ ಬಿಟ್ಟು ಸನ್ಮಾರ್ಗದಿಂದ ದುರ್ಮಾರ್ಗದೆಡೆಗಿನ ಪಯಣವಾಗಿದೆ.

﴿ وَمَن يُشَاقِقِ ٱلرَّسُولَ مِنۢ بَعْدِ مَا تَبَيَّنَ لَهُ ٱلْهُدَىٰ وَيَتَّبِعْ غَيْرَ سَبِيلِ ٱلْمُؤْمِنِينَ نُوَلِّهِۦ مَا تَوَلَّىٰ وَنُصْلِهِۦ جَهَنَّمَ ۖ وَسَآءَتْ مَصِيرًا ١١٥ ﴾

"ಸನ್ಮಾರ್ಗವು ವ್ಯಕ್ತವಾದ ಬಳಿಕವೂ ಸಂದೇಶವಾಹಕರ ವಿರುದ್ಧ ಟೊಂಕಕಟ್ಟಿಕೊಂಡವನನ್ನೂ ಸತ್ಯವಿಶ್ವಾಸಿಗಳ ಮಾರ್ಗದ ಹೊರತು ಅನ್ಯ ಮಾರ್ಗಗಳಲ್ಲಿ ನಡೆಯುವವನನ್ನೂ ಅವನು ತಾನಾಗಿ ತಿರುಗಿಕೊಂಡ ಕಡೆಗೇ ನಾವು ತಿರುಗಿಸಿ ಬಿಡುವೆವು ಮತ್ತು ಅವನನ್ನು ಅತ್ಯಂತ ನಿಕೃಷ್ಟ ಸ್ಥಾನವಾಗಿರುವ ನರಕಕ್ಕೆ ತಳ್ಳಿ ಬಿಡುವೆವು." (4:115)

4. ಅಲ್ಲಾಹನ ಸ್ವಿಫಾತ್‌ಗಳ ಕುರಿತು ಕುರ್‌ಆನ್ ಮತ್ತು ಹದೀಸ್ ವಿವರಿಸಿದ ವಚನಗಳನ್ನು ಸಲಫ್‌ಗಳು ವ್ಯಾಖ್ಯಾನಿಸದಿರಲು ಕಾರಣವೇನು ಎಂಬ ಪ್ರಶ್ನೆ ಪ್ರಸಕ್ತವಾಗಿದೆ. ಈ ವ್ಯಾಖ್ಯಾನವು ಒಳಿತಿನ ಕಾರ್ಯವಾಗಿರುತ್ತಿದ್ದರೆ ನಮಗಿಂತ ಮೊದಲು ಅವರೇ ಅದನ್ನು ಮಾಡಿ ಪ್ರಚುರಪಡಿಸುತ್ತಿದ್ದರು. ಒಂದು ಧಾರ್ಮಿಕ ವಿಷಯದಲ್ಲಿ ಅದು ಕೂಡಾ ಅಸ್ಮಾಉ ವಸ್ವಿಫಾತ್‌ನಂತಹ ಮೂಲಭೂತವಾದ ಅಖೀದದ ವಿಷಯದಲ್ಲಿ ಸಲಫ್‌ಗಳು ಸ್ವೀಕರಿಸದ ಮಾರ್ಗವನ್ನು ನಾವು ಸ್ವೀಕರಿಸುವುದಾದರೆ ಮಾರ್ಗವು ಭ್ರಷ್ಟವಾಗಿದೆಯೆಂದು ಸ್ಪಷ್ಟಪಡಿಸಲು ಅದೇ ಪುರಾವೆ ಸಾಕು. ಅನ್ಯಥಾ ಕನಿಷ್ಟ ಧರ್ಮದ ಪ್ರಾಥಮಿಕ ಪಾಠ ತಿಳಿದವರು ಕೂಡಾ ಸಚ್ಚರಿತರಾದ ಪೂರ್ವಿಕರು ಪಥಭ್ರಷ್ಟರಾಗಿ ನಂತರದವರು ಸನ್ಮಾರ್ಗದಲ್ಲಿದ್ದಾರೆಂದು ಹೇಳಬಲ್ಲರೇ?

ಅಭಿಪ್ರಾಯ ಭಿನ್ನತೆ ಮತ್ತು ಸೈದ್ಧಾಂತಿಕ ಗೊಂದಲಗಳು ಉಂಟಾದಾಗ ಪ್ರವಾದಿ(ﷺ) ರವರು ನಮಗೆ ಸೂಚಿಸಿದ ಸುರಕ್ಷಿತ ಮಾರ್ಗ ಸಲಫ್‌ಗಳ ಅನುಸರಣೆಯಾಗಿದೆ.

5. ಪ್ರವಾದಿ(ﷺ) ರವರು ಮತ್ತು ಸ್ವಹಾಬಿಗಳು ಒಂದು ವಿಷಯದ ಕುರಿತು ಯಾವುದೇ ವಿವರಣೆ ನೀಡದಿರುವಾಗ ನಾವು ಅದನ್ನು ವಿವರಿಸಲು ಹೋಗುವುದು ನಮಗೆ ತಿಳಿದೋ ತಿಳಿಯದೆಯೋ ಪಾವನರಾದ ಆ ಪೂರ್ವಿಕರನ್ನು ಕೀಳಂದಾಜಿಸುವುದು ಹಾಗೂ ಧರ್ಮದ ಮೂಲಭೂತ ವಿಷಯಗಳಲ್ಲಿ ಕೂಡಾ ಅವರು ಸಾಕಷ್ಟು ತಿಳಿದುಕೊಂಡವರಲ್ಲವೆಂದು ಚಿತ್ರೀಕರಿಸುವ ಕಾರ್ಯವಾಗುತ್ತದೆ ಎನ್ನುವುದನ್ನು ಮರೆಯಬಾರದು.

ಇಬ್ನ್ ಮಸ್‌ಊದ್(﵁) ವಿವರಿಸುವಂತೆ ಅವರೇ (ಸ್ವಹಾಬಿಗಳು)

ಅತ್ಯುತ್ತಮರು. ಅವರು ಸಂಶಯಗಳನ್ನು ನಿವಾರಿಸಿ ಶ್ರೇಷ್ಠ ಗುರುವರ್ಯರಿಂದ ಧರ್ಮವನ್ನು ಸರಿಯಾದ ರೂಪದಲ್ಲಿ ಕಲಿತವರಾಗಿದ್ದಾರೆ. ವಂಚನೆ, ಅಭಿನಯಗಳಿಲ್ಲದೆ ಜ್ಞಾನ ಮತ್ತು ಭಕ್ತಿ ಸಮನ್ವಯಗೊಂಡಿದ್ದ ಮಹಾತ್ಮರು. ನಾವು ಅವರ ಮಾರ್ಗವನ್ನು ಅನುಗಮಿಸಬೇಕಾಗಿದೆ.

ಪ್ರಸ್ತುತ ಮಾರ್ಗವನ್ನು ತೊರೆದು ಮಾಡುವ ವ್ಯಾಖ್ಯಾನಗಳು ಸತ್ಯವಿಶ್ವಾಸಿಗಳು ಕೂಡಾ ಅಲ್ಲದ ಗ್ರೀಕ್ ತತ್ವಶಾಸ್ತ್ರ ಮತ್ತು ವಚನಶಾಸ್ತ್ರದ ಅಭಿಪ್ರಾಯಗಳಾಗಿವೆ.

6. ವ್ಯಾಖ್ಯಾನದ ವಕ್ತಾರರಾಗಿ ಮಾರ್ಪಟ್ಟು ಆ ಮಾರ್ಗದಲ್ಲಿ ಜೀವನದ ಸುದೀರ್ಘಾವಧಿಯನ್ನು ಕಳೆದ ಹಲವರು ಜೀವನದ ಅಂತಿಮ ಘಟ್ಟದಲ್ಲಿ ಪಶ್ಚಾತ್ತಾಪಪಟ್ಟು ಮರಳಿದ ಇತಿಹಾಸ ನಮ್ಮ ಮುಂದಿದೆ. ಆದರೂ ಪ್ರಮಾಣಗಳು ಮತ್ತು ಸಚ್ಚರಿತರಾದ ಪೂರ್ವಿಕರ ಮಾರ್ಗವನ್ನು ತೊರೆದ ವಕ್ತಾರರೇ ಕಾಲಕ್ರಮೇಣ ತಮ್ಮ ವಾದಗಳಿಂದ ಹಿಂದೆ ಸರಿದರೂ ಅದನ್ನು ಹಿಂಬಾಲಿಸುವುದು ಬಾಲಿಶ ನಡವಳಿಕೆಯಾಗುತ್ತದೆ.

7. ವ್ಯಾಖ್ಯಾನದ ಆರಂಭವೇ ಪಥಭ್ರಷ್ಟತೆಯಾಗಿದೆ. ಏಕೆಂದರೆ ಅಲ್ಲಾಹನ ಗುಣ ವಿಶೇಷಣಗಳನ್ನು ಸೃಷ್ಟಿಗಳ ಗುಣ ವಿಶೇಷಣಗಳೊಂದಿಗೆ ಹೋಲಿಸಿ ಗ್ರಹಿಸುವುದರಿಂದ ವ್ಯಾಖ್ಯಾನದ ಬಾಗಿಲು ತೆರೆಯಲ್ಪಡುತ್ತದೆ. ವಾಸ್ತವದಲ್ಲಿ ಅಲ್ಲಾಹನ ಮಹತ್ವ ಮತ್ತು ಔನ್ನತ್ಯಕ್ಕೆ ಭೂಷಣವಾದ ರೀತಿಯಲ್ಲಿ ಅವನ ವಿಶೇಷಣಗಳನ್ನು ಸ್ವೀಕರಿಸಿರುತ್ತಿದ್ದರೆ ಇಂತಹ ವ್ಯಾಖ್ಯಾನ ಹಾಗೂ ನಿಷೇಧಗಳೆಡೆಗೆ ಹೋಗಬೇಕಾದ ಸಂದರ್ಭ ಎದುರಾಗುವುದಿಲ್ಲ. ನಿಜವಾಗಿ ನೋಡಿದರೆ, ಇವರು ಯಾವುದರ ಹೋಲಿಕೆಯಿಂದ ಭಯಪಡುತ್ತಾರೋ ಮೊತ್ತಮೊದಲು ಅದಕ್ಕೇ ಬಿದ್ದುಬಿಟ್ಟಿದ್ದಾರೆ. ತನ್ನಿಮಿತ್ತ ಅವರು ರಕ್ಷಣೆ ಪಡೆಯಲು ವ್ಯಾಖ್ಯಾನವೆಂಬ ಮತ್ತೊಂದು ಅಪಾಯಕ್ಕೆ ಸಿಲುಕಿಬಿಟ್ಟರು.

ಪ್ರಮಾಣಗಳು ಕಲಿಸುವ ಸ್ವಿಫಾತ್‌ಗಳು ವ್ಯಾಖ್ಯಾನದ ವಕ್ತಾರರು ಮುಂದಿಡುವ ಅರ್ಥ ಮತ್ತು ಆಶಯಗಳಿಗೆ ಅತೀತವಾಗಿ ನೆಲೆಗೊಂಡಿದೆ. ಅಥವಾ ವ್ಯಾಖ್ಯಾನದಲ್ಲಿ ಪರಿಮಿತವಾದ ಕೆಲವು ಅರ್ಥಗಳಿದ್ದರೆ ಸಲಫ್‌ಗಳು ಸ್ವೀಕರಿಸಿದ ಸರಿಯಾದ ಸ್ವಿಫಾತ್‌ಗಳನ್ನು ಸ್ವೀಕರಿಸುವಾಗ ಅದು ಅದಕ್ಕಿಂತಲೂ ಮಿಗಿಲಾದ ಆಶಯಗಳನ್ನು ಹೊಂದಿರುತ್ತದೆ ಎಂದರ್ಥ.

ಉದಾಹರಣೆಗೆ, ಅಲ್ಲಾಹನ ಇಳಿಯುವಿಕೆ (ನುಝೂಲ್) ಎಂಬ ಸ್ವಿಫತ್ತನ್ನು ಅನುಗ್ರಹ ಅಥವಾ ಮಲಕ್‌ಗಳು ಎಂದೆಲ್ಲ ವ್ಯಾಖ್ಯಾನಿಸುವಾಗ ವಾಸ್ತವದಲ್ಲಿ ಅದು ಒಂದು ಭಾಗ ಮಾತ್ರ ಆಗುತ್ತದೆ. ಆದರೆ ಹದೀಸ್‌ನಲ್ಲಿ ಬಂದ ಇದರ ವಿವರಣೆ ಅದಕ್ಕಿಂತ ಮಿಗಿಲಾಗಿದೆ.

ಪ್ರವಾದಿ(ﷺ) ರವರು ಹೇಳುತ್ತಾರೆ: "ರಾತ್ರಿಯ ಅಂತ್ಯದ ಮೂರನೇ ಒಂದು ಭಾಗ ಉಳಿದಾಗ ಅಲ್ಲಾಹನು ಒಂದನೇ ಆಕಾಶಕ್ಕೆ ಇಳಿದು ಬರುತ್ತಾನೆ. ಅನಂತರ ಹೀಗೆ ಹೇಳುತ್ತಾನೆ: ನನ್ನೊಂದಿಗೆ ಪ್ರಾರ್ಥಿಸುವವರು ಯಾರಿದ್ದಾರೆ? ಅವನಿಗೆ ನಾನು ಉತ್ತರವೀಯುವೆನು. ನನ್ನೊಂದಿಗೆ ಬೇಡುವವರು ಯಾರಿದ್ದಾರೆ? ಅವರಿಗೆ ನಾನು ಅದನ್ನು ದಯಪಾಲಿಸುತ್ತೇನೆ. ನನ್ನೊಂದಿಗೆ ಕ್ಷಮೆ ಯಾಚಿಸುವವರು ಯಾರಿದ್ದಾರೆ? ನಾನು ಅವರನ್ನು ಕ್ಷಮಿಸಿಬಿಡುತ್ತೇನೆ." (ಬುಖಾರಿ ಮುಸ್ಲಿಮ್)

ಅಲ್ಲಾಹನ ಕುರಿತು ಪ್ರವಾದಿ(ﷺ) ರವರು ಹೇಳಿದ ಒಂದು ಕಾರ್ಯದ ಕುರಿತು ಹಾಗಲ್ಲ ಎಂದು ಹೇಳುವ ಅಧಿಕಾರ ಯಾರಿಗಿದೆ? ಹಾಗೆಯೇ ಅಲ್ಲಾಹನ ಕೈ (ಯದ್) ಎಂಬ ವಿಶೇಷಣವನ್ನು ಕೇವಲ ಶಕ್ತಿ, ಸಹಾಯ ಎಂದು ವ್ಯಾಖ್ಯಾನಿಸುವಾಗಲೂ ಹೀಗೆಯೇ ಪ್ರಮಾದ ಸಂಭವಿಸುತ್ತದೆ.

## ಈ ವಿಷಯದಲ್ಲಿ ಪ್ರತಿಯೊಬ್ಬ ಸತ್ಯವಿಶ್ವಾಸಿ ಸ್ವೀಕರಿಸಬೇಕಾದ ನಿಲುವು:

ದೃಢಪಟ್ಟ ಪ್ರಮಾಣಗಳಲ್ಲಿ ವರದಿಯಾದ ಸ್ವಿಫಾತ್‌ಗಳಲ್ಲಿ ವಿಶ್ವಾಸವಿರಿಸಿ, ಅವುಗಳನ್ನು ಅಂಗೀಕರಿಸುವುದು. ಆದರೆ ಅವುಗಳು ಸೃಷ್ಟಿಗಳ ವಿಶೇಷಣಗಳಿಗೆ ಸಮಾನ ಎಂಬ ಯೋಚನೆ ಯಾವತ್ತೂ ಬರಬಾರದು. ಅಲ್ಲಾಹನ ಮಹತ್ವಕ್ಕೆ ಭಂಗವುಂಟು ಮಾಡುವ ಅಥವಾ ಅದಕ್ಕೆ ಭೂಷಣವಲ್ಲದ ನ್ಯೂನತೆಗಳ ಯಾವುದೇ ವಿಶೇಷಣಗಳನ್ನು ಅವನಿಗೆ ಸೇರಿಸಬಾರದು. ಅಂದರೆ ಸ್ವೀಕಾರಕ್ಕೆ ಯೋಗ್ಯತೆಯಿಲ್ಲದ ವರದಿಗಳು ಮತ್ತು ಅವುಗಳಲ್ಲಿ ಬಂದಿರುವ ತಪ್ಪು ಪ್ರಯೋಗಗಳನ್ನು ನಾವು ಸ್ವೀಕರಿಸಬೇಕಾಗಿಲ್ಲ.

ಒಬ್ಬನು ಅಲ್ಲಾಹನ ಯಾವುದಾದರೊಂದು ಸ್ವಿಫಾತ್‌ಗಳ ಕುರಿತು ಕೇಳಿದರೆ ಅವನಿಗೆ ಇಮಾಮ್ ರಬೀಅ್(ﷺ) ಮತ್ತು ಇಮಾಮ್ ಮಾಲಿಕ್(ﷺ) ರವರು ಹೇಳಿದಂತೆ ಉತ್ತರವನ್ನು ನೀಡಬೇಕು. "ಹೇಗೆ ಎನ್ನುವುದು ಅಜ್ಞಾತವಾಗಿದೆ. ಆ ವಿಶೇಷಣಗಳ ಮೇಲೆ ವಿಶ್ವಾಸವಿರಿಸುವುದು ಕಡ್ಡಾಯವಾಗಿದೆ. ಹೇಗೆ ಎಂಬ ಪ್ರಶ್ನೆ ಬಿದ್‌ಅತ್ತಾಗಿದೆ." ಏಕೆಂದರೆ ಆ ಪ್ರಶ್ನೆ ಮನುಷ್ಯನ ಜ್ಞಾನದ

ಪರಿಧಿಯಲ್ಲಿಲ್ಲ. ಆದುದರಿಂದಲೇ ಅದರ ಉತ್ತರವನ್ನು ನೀಡಲೂ ಮನುಷ್ಯನು ಅಸಮರ್ಥ.

ಅಲ್ಲಾಹನ ಸ್ವಿಫಾತ್‌ಗಳ ಕುರಿತು ಅವುಗಳು ಹೇಗೆಂದು ಪ್ರಶ್ನಿಸು-ವವರೊಂದಿಗೆ, ಅಲ್ಲಾಹನು ಹೇಗಿದ್ದಾನೆ? ಎಂದು ಮರುಪ್ರಶ್ನೆ ಕೇಳಿದರೆ ಅವನ ಉತ್ತರ ನನಗೆ ಗೊತ್ತಿಲ್ಲ ಎಂದಾಗಿರುತ್ತದೆ. ಹೀಗಿರುವಾಗ ಅಲ್ಲಾಹನ ವಿಶೇಷಣಗಳ ಕುರಿತು ನಮ್ಮೊಂದಿಗೆ ಪ್ರಶ್ನಿಸಿದರೆ ಅದು ಹೇಗೆಂದು ನಮಗೆ ಗೊತ್ತಿಲ್ಲ ಎನ್ನುವುದೇ ನಾವು ನೀಡಬೇಕಾದ ಉತ್ತರವಾಗಿರುತ್ತದೆ. ವರ್ಣಿಸಲ್ಪಡುವುದರ ರೂಪ ಹೇಗಿದೆಯೆಂದು ವಿವರಿಸಲು ಅಸಾಧ್ಯವಾಗಿರುವಾಗ, ಅದರ ವಿಶೇಷಣಗಳ ರೂಪವನ್ನು ತಿಳಿಯಲೂ ಸಾಧ್ಯವಿಲ್ಲ. ಅಲ್ಲಾಹನ ಸತ್ತೆ (ಝಾತ್) ಹೇಗಿದೆಯೆಂದು ತಿಳಿಯದವನು ಅವನ ವಿಶೇಷಣ ಹೇಗಿದೆಯೆಂದು ಪ್ರಶ್ನಿಸುವುದರಲ್ಲಿ ಅರ್ಥವಿಲ್ಲ.

ಪ್ರಮಾಣಗಳು ಮತ್ತು ಸಚ್ಚರಿತರಾದ ಪೂರ್ವಿಕರ ಮಾರ್ಗವನ್ನು ಅವಲಂಬಿಸದಿದ್ದರೆ ಸೈದ್ಧಾಂತಿಕ ಗೊಂದಲ ವರ್ಧಿಸುತ್ತದೆ. ಪ್ರಮಾ-ಣಗಳನ್ನು ಆತ್ಮಾರ್ಥವಾಗಿ ಸ್ವೀಕರಿಸಿದ ಸಚ್ಚರಿತರ ಪಥವನ್ನು ಅನುಸರಿಸುವ ಸೌಭಾಗ್ಯವನ್ನು ಅಲ್ಲಾಹನು ನಮಗೆಲ್ಲರಿಗೂ ದಯಪಾಲಿಸಲಿ. ಆಮೀನ್. ■

---

*18 ನೇ ಪುಟದಿಂದ*

## ಅವಿಶ್ವಾಸಿಗಳನ್ನು ಕೊಲ್ಲಬೇಕೇ?

ಆತನನ್ನು ಕೊಲ್ಲಲು ಯಾರಿಗೂ ಅನುಮತಿಯಿಲ್ಲ. ಏಕೆಂದರೆ, ಬೇರೆ ಯಾರಾದರೂ ಆತನನ್ನು ಕೊಲ್ಲುವುದು ರಾಷ್ಟ್ರ ನಾಯಕನ ಅಧಿಕಾರವನ್ನು ಕಸಿದಂತಾಗುತ್ತದೆ. ಹಾಗೆಯೇ ಅದು ಜನರ ಮಧ್ಯೆ ಅರಾಜಕತೆಗೆ ಕಾರಣವಾಗುತ್ತದೆ... ಈ ಎಲ್ಲಾ ಕಾರಣಗಳಿಂದ ರಾಷ್ಟ್ರ ನಾಯಕ ಅಥವಾ ಆತ ನೇಮಿಸಿದ ವ್ಯಕ್ತಿಯಲ್ಲದೆ ಇನ್ನಾರೂ ಆತನನ್ನು ಕೊಲ್ಲುವ ಕಾರ್ಯವನ್ನು ಕೈಗೆತ್ತಿಕೊಳ್ಳಬಾರದು." (ಅಶ್ಯರ್ಹುಲ್ ಮುಮ್ತಿಅ್ 14/455)

ನಾಲ್ಕನೆಯದಾಗಿ, ಒಂದು ಗುಂಪನ್ನು ಸಂಪೂರ್ಣವಾಗಿ ಅವಿಶ್ವಾಸಿ-ಗಳೆಂದು ಘೋಷಿಸುವುದು ಮತ್ತು ಒಬ್ಬ ವ್ಯಕ್ತಿಯನ್ನು ನಿರ್ದಿಷ್ಟವಾಗಿ ಅವಿಶ್ವಾಸಿಯೆಂದು ಘೋಷಿಸುವುದರ ಮಧ್ಯೆ ವ್ಯತ್ಯಾಸವಿದೆ. ಒಬ್ಬ ವ್ಯಕ್ತಿಯನ್ನು ನಿರ್ದಿಷ್ಟವಾಗಿ ಅವಿಶ್ವಾಸಿಯೆಂದು ಘೋಷಿಸಬೇಕಾ-ದರೆ ಕೆಲವು ಷರತ್ತುಗಳು ನೆರವೇರಬೇಕಾದುದು ಮತ್ತು ಅಡ್ಡಿಗಳು ನಿವಾರಣೆಯಾಗಬೇಕಾದುದು ಅನಿವಾರ್ಯವಾಗಿದೆ.

ಇಬ್ನ್ ತೈಮಿಯ್ಯ(ﷺ) ಹೇಳುತ್ತಾರೆ:

فَإِنَّ نُصُوصَ الْوَعِيدِ الَّتِي فِي الْكِتَابِ وَالسُّنَّةِ وَنُصُوصَ الْأَئِمَّةِ بِالتَّكْفِيرِ وَالتَّفْسِيقِ وَنَحْوِ ذَلِكَ لَا يُسْتَلْزَمُ ثُبُوتُ مُوجَبِهَا فِي حَقِّ الْمُعَيَّنِ إِلَّا إِذَا وُجِدَتِ الشُّرُوطُ وَانْتَفَتِ الْمَوَانِعُ. لَا فَرْقَ فِي ذَلِكَ بَيْنَ الْأُصُولِ وَالْفُرُوعِ.

"ಇಂತಿಂತಹದ್ದನ್ನು ಮಾಡಿದರೆ ಅವಿಶ್ವಾಸಿಗಳಾಗುವಿರಿ ಅಥವಾ ಫಾಸಿಕ್‌ಗಳಾಗುವಿರಿ ಎಂದು ಕುರ್‌ಆನ್ ಮತ್ತು ಸುನ್ನತ್ತಿನ ವಚನಗಳ-ಲ್ಲಿರುವ ಎಚ್ಚರಿಕೆಗಳು ಮತ್ತು ಇಮಾಮರ ಹೇಳಿಕೆಗಳು ಒಬ್ಬ ನಿರ್ದಿಷ್ಟ ವ್ಯಕ್ತಿಯನ್ನು ಅವಿಶ್ವಾಸಿ ಅಥವಾ ಫಾಸಿಕ್ ಎಂದು ಘೋಷಿಸುವುದನ್ನು ಅನಿವಾರ್ಯಗೊಳಿಸುವುದಿಲ್ಲ. ಹಾಗೆ ಘೋಷಿಸಬೇಕಾದರೆ ಕೆಲವು ಷರತ್ತುಗಳು ನೆರವೇರಬೇಕಾದುದು ಮತ್ತು ಕೆಲವು ಅಡ್ಡಿಗಳು ನಿವಾ-ರಣೆಯಾಗಬೇಕಾದುದು ಅತ್ಯಗತ್ಯ. ಅದು ಮೂಲಭೂತ ವಿಷಯಗ-ಳಲ್ಲಾಗಿದ್ದರೂ ಅಥವಾ ಶಾಖಾಪರ ವಿಷಯಗಳಲ್ಲಾಗಿದ್ದರೂ ಸರಿ." (ಮಜ್ಮೂಉಲ್ ಫತಾವಾ 10/372)

ಅಂದರೆ ಉದಾಹರಣೆಗೆ, ಅವಿಶ್ವಾಸದ ಮಾತನ್ನು ಹೇಳುವವನು ಅವಿಶ್ವಾಸಿಯಾಗುತ್ತಾನೆಂದು ಕುರ್‌ಆನ್ ಮತ್ತು ಸುನ್ನತ್ತಿನಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಆದರೆ ಆ ಮಾತನ್ನು ಹೇಳುವವನನ್ನು ಅವಿಶ್ವಾಸಿಯೆಂದು ಘೋಷಿಸಬೇಕಾದರೆ ಆ ವಿಷಯದಲ್ಲಿ ಸೂಕ್ಷ್ಮ ಪರಿಶೋಧನೆ ಮಾಡಬೇಕಾದುದು ಕಡ್ಡಾಯವಾಗಿದೆ. ಏಕೆಂದರೆ ಕೆಲವೊಮ್ಮೆ ಆ ವ್ಯಕ್ತಿ ಅಜ್ಞಾನಿಯಾಗಿರಬಹುದು ಅಥವಾ ಬಲವಂ-ತಕ್ಕೊಳಗಾಗಿ ಆ ಮಾತನ್ನು ಹೇಳಿರಬಹುದು. ಇಂತಹ ಸಂದರ್ಭ-ಗಳಲ್ಲಿ ಆತ ಆ ಮಾತನ್ನು ಹೇಳಿದ್ದು ನಿಜವಾಗಿದ್ದರೂ ಸಹ ಆತನನ್ನು ಅವಿಶ್ವಾಸಿಯೆಂದು ಘೋಷಿಸಲಾಗುವುದಿಲ್ಲ. ಹೆಚ್ಚು ಬಲ್ಲವನು ಅಲ್ಲಾಹು. ■

# ಇಸ್ಲಾಮ್ ಪ್ರಕೃತಿ ವಿರುದ್ಧ ಧರ್ಮವೇ?

ದೈವಿಕ ನಿಯಮಗಳನ್ನು ಅಂಗೀಕರಿಸಿ ಅನುಸರಿಸುವ ಮೂಲಕ ಸೃಷ್ಟಿಕರ್ತನ ಇಚ್ಛೆಗನುಸಾರ ಜೀವಿಸಲು ತೀರ್ಮಾನಿಸಿದರೆ ಮಾತ್ರ ಮನುಷ್ಯನು ಯಥಾರ್ಥ ಮುಸ್ಲಿಮನಾಗುತ್ತಾನೆ. ಇಸ್ಲಾಮ್ ಎಲ್ಲಾ ರೀತಿಯಲ್ಲಿಯೂ ಮಾನವ ಪ್ರಕೃತಿಗೆ ಪೂರಕವಾದ ಧರ್ಮವಾಗಿದೆ. ಅದು ಮಾತ್ರ ಮನುಷ್ಯನಿಗೆ ಪ್ರಾಯೋಗಿಕ ಮತ್ತು ನೇರವಾದ ಮಾರ್ಗದರ್ಶನವನ್ನು ನೀಡುತ್ತದೆ. ಪ್ರಪಂಚದ ಪ್ರವೃತ್ತನ ರೀತಿಯನ್ನು ನಿಶ್ಚಯಿಸಿದ ಅಲ್ಲಾಹನು ಮನುಷ್ಯನ ಪ್ರಕೃತಿಗೆ ಪೂರಕವಾದ ಧರ್ಮ ಯಾವುದೆಂದು ಚೆನ್ನಾಗಿ ಬಲ್ಲನು.

ಇಸ್ಲಾಮ್ ಪ್ರಕೃತಿಗೆ ವಿರುದ್ಧವಾದ ಧರ್ಮವೆನ್ನುವುದು ಇಸ್ಲಾಮಿನ ಕುರಿತು ಕೆಲವು ಸ್ಥಾಪಿತ ಹಿತಾಸಕ್ತ ಪಂಗಡಗಳು ಮಾಡುತ್ತಿರುವ ಆರೋಪಗಳಲ್ಲಿ ಒಂದಾಗಿದೆ. ಆದರೆ ಈ ದೃಷ್ಟಿಕೋನದಿಂದ ತಾವು ಏನನ್ನು ಉದ್ದೇಶಿಸುತ್ತಿದ್ದೇವೆಂದು ನಿರ್ಣಯಿಸುವುದರಲ್ಲಿ ಆರೋಪಕರು ಪರಾಜಿತರಾಗುವುದು ಸಾಮಾನ್ಯವಾಗಿದೆ. ಒಂದು ಧರ್ಮವೆಂಬ ನೆಲೆಯಲ್ಲಿ ಇಸ್ಲಾಮ್ ಪ್ರಕೃತಿಯೊಂದಿಗೆ ಹೊಂದಿ-ಕೊಳ್ಳುವುದಿಲ್ಲ ಅಥವಾ ಇಸ್ಲಾಮ್‌ನ ನಿಯಮ ಹಾಗೂ ತತ್ವಗಳು ಪ್ರಕೃತಿಯ ಸ್ವರೂಪ, ವ್ಯವಸ್ಥೆ ಮತ್ತು ಮೌಲಿಕ ಸ್ವಭಾವ ಮುಂತಾ-ದವುಗಳಿಗೆ ಪೂರಕವಾಗಿಲ್ಲವೆಂದು ಅವರು ಅರ್ಥಮಾಡಿಕೊಂಡಿ-ರಬಹುದು. ಅಥವಾ ಇಸ್ಲಾಮ್ ಮಾನವ ಪ್ರಕೃತಿ ಹಾಗೂ ಅವನ ಸ್ವಾಭಾವಿಕ ಗುಣಗಳಿಗೆ ತದ್ವಿರುದ್ಧವಾಗಿದೆಯೆಂದು ಅರ್ಥವಾಗಿರಬ-ಹುದು. ಇದರಲ್ಲಿ 'ಪ್ರಕೃತಿ ವಿರುದ್ಧ ಸ್ವಭಾವ' ಎಂಬ ವಿಶೇಷಣವನ್ನು ಯಾವ ಅರ್ಥದಲ್ಲಿ ತೆಗೆದುಕೊಂಡರೂ ಅದು ಇಸ್ಲಾಮಿನ ಖಾತೆಗೆ ಜಮೆಯಾಗುವ ವಿಶೇಷಣವಾಗುವುದಿಲ್ಲ. ಇಸ್ಲಾಮ್ ಅದನ್ನು ಸ್ವಯಂ ಬಣ್ಣಿಸುವುದು 'ಪ್ರಕೃತಿ ಧರ್ಮ' ಎಂದಾಗಿದೆ. ಇಸ್ಲಾಮಿನ ಪ್ರಕೃತಿ ಪರತೆಯ ಕುರಿತು ಚಿಂತಿಸುವಾಗ ಪರಿಗಣನಾರ್ಹವಾದ ಕೆಲವು ಪ್ರತ್ಯೇಕ ಕಾರ್ಯಗಳಿವೆ.

ಇಸ್ಲಾಮ್ ಪ್ರಕೃತಿಯನ್ನು ಅದರ ಸೂಕ್ಷ್ಮ ಹಾಗೂ ಸ್ಥೂಲವಾದ ಅವಸ್ಥೆಯ ಪ್ರಭೇದ ಸೃಷ್ಟಿಸಿ ಸಮಂಜಸಗೊಳಿಸಿದ ಮಹಾ ಶಕ್ತಿಯ ಮಾರ್ಗದರ್ಶನವಾಗಿದೆ. ಸೃಷ್ಟಿಕರ್ತನ ಮಾರ್ಗದರ್ಶನ ಪ್ರಕಾರ ಪ್ರಕೃತಿ ಮತ್ತು ಅದರಲ್ಲಿರುವ ಕೊಡುಗೆಗಳನ್ನು ಅನುಭವಿಸಿಕೊಂಡು ಜೀವಿಸಲು ಮನುಷ್ಯನಿಗೆ ಅವನೇ ಅನುಮತಿಸಿದ್ದಾನೆ.

ಮನುಷ್ಯನನ್ನು ಸೃಷ್ಟಿಸಿ ಅವನಿಗೆ ಜೀವನ ಮತ್ತು ಮರಣವನ್ನು ನಿಶ್ಚಯಿಸಿದ ಪ್ರಪಂಚದೊಡೆಯನು ಮಾನವ ಪ್ರಕೃತಿಯನ್ನು ವೈವಿಧ್ಯತೆಗಳೊಂದಿಗೆ ವ್ಯವಸ್ಥೆಗೊಳಿಸಿಟ್ಟಿದ್ದಾನೆ. ಓರ್ವ ಜೀವಿಯೆಂಬ ನೆಲೆಯಲ್ಲಿ ಮನುಷ್ಯನಲ್ಲಿ ಸಹಜವಾಗಿ ನೆಲೆಗೊಂಡಿರುವ ಗುಣಸ್ವಭಾ-ವಗಳನ್ನು ಮೀರಿ ಅಥವಾ ಅವುಗಳನ್ನು ಅದುಮಿ ಹಿಡಿದುಕೊಂಡು ಸಾಗುವುದು ಅಸಾಧ್ಯ. ಆದರೆ ಅವುಗಳನ್ನು ಸೃಷ್ಟಿಕರ್ತನ ಅಭೀಷ್ಟೆಯ ಪ್ರಕಾರ ನಿಯಂತ್ರಿಸಿ ವಿನಿಯೋಗಿಸುವ ಮೂಲಕ ಮುನ್ನಡೆಯಲು ಮನುಷ್ಯನು ಬಾಧ್ಯಸ್ಥನಾಗಿರುವನೆಂದು ಪವಿತ್ರ ಕುರ್‌ಆನ್ ಮನುಕುಲಕ್ಕೆ ತಿಳಿಸಿಕೊಡುತ್ತದೆ.

ಅಲ್ಲಾಹನು ಹೇಳುತ್ತಾನೆ:

﴿ فَأَقِمْ وَجْهَكَ لِلدِّينِ حَنِيفًا ۚ فِطْرَتَ
ٱللَّهِ ٱلَّتِى فَطَرَ ٱلنَّاسَ عَلَيْهَا ۚ لَا تَبْدِيلَ لِخَلْقِ

ٱللَّهِۚ ذَٰلِكَ ٱلدِّينُ ٱلْقَيِّمُ وَلَٰكِنَّ
أَكْثَرَ ٱلنَّاسِ لَا يَعْلَمُونَ ﴿٣٠﴾

“ಆದುದರಿಂದ ನೀವು ಏಕನಿಷ್ಠೆಯಿಂದ ನಿಮ್ಮ ಮುಖವನ್ನು ಈ ಧರ್ಮದ ಕಡೆ ಕೇಂದ್ರೀಕರಿಸಿರಿ. ಅಲ್ಲಾಹನು ಮಾನವನನ್ನು ಸೃಷ್ಟಿಸಿದ ಪ್ರಕೃತಿಯಲ್ಲೇ ಸ್ಥಿರವಾಗಿರಿ. ಅಲ್ಲಾಹನು ಮಾಡಿದ ರಚನೆಯನ್ನು ಬದಲಾಯಿಸಲಾಗದು. ಇದುವೇ ಸತ್ಯ ಮತ್ತು ಸರಿಯಾದ ಧರ್ಮವಾಗಿದೆ. ಆದರೆ ಹೆಚ್ಚಿನವರು ಅರಿಯುವುದಿಲ್ಲ.” (30:30)

ಪ್ರಕೃತಿ ಧರ್ಮವಾದ ಇಸ್ಲಾಮ್ ಮನುಷ್ಯ ವರ್ಗದ ಏಕೀಕರಣಕ್ಕಿರುವ ಏಕೈಕ ಉಪಾಧಿಯಾಗಿದೆಯೆಂದು ಪವಿತ್ರ ಕುರ್‌ಆನ್ ಹೇಳುತ್ತದೆ. ಹಲವು ಧರ್ಮಗಳ ಅನುಸರಣೆ ಹಾಗೂ ಬಹುದೇವವಿಶ್ವಾಸವನ್ನು ಸ್ವೀಕರಿಸಿದರೆ ಸಂಜಾತವಾಗುವ ವೈವಿಧ್ಯತೆಗಳನ್ನು ಮನುಷ್ಯ ವರ್ಗವನ್ನು ವಿಭಜಿಸುತ್ತದೆ. ಪ್ರಕೃತಿ ಧರ್ಮವಾದ ಇಸ್ಲಾಮನ್ನು ಅಂಗೀಕರಿಸಿದರೆ ಈ ಭಿನ್ನತೆಗಳೆಲ್ಲವೂ ಮಾಯವಾಗುತ್ತದೆ. ಮಾನವ ಪ್ರಕೃತಿಯಲ್ಲಿ ಅಂತರ್ಲೀನವಾಗಿರುವ ವೈಶಿಷ್ಟ್ಯತೆಗಳು ಮತ್ತು ಗುಣಗಳೆಲ್ಲವೂ ಏಕದೇವ ದರ್ಶನದ ಅನಿವಾರ್ಯತೆ ಎಂಬ ಸಾಕ್ಷ್ಯವನ್ನು ಪ್ರತಿನಿಧೀಕರಿಸುತ್ತದೆ. ಹೀಗಿರುವಾಗ ಮನುಷ್ಯನು ಬಹುದೇವವಿಶ್ವಾಸಿಯಾಗುವುದು ಪ್ರಕೃತಿ ಮತ್ತು ಸಹಜ ಮೌಲಿಕತೆಗೆ ತದ್ವಿರುದ್ಧವಾದ ಕಾರ್ಯವಾಗಿದೆ. ಲೋಕದಲ್ಲಿರುವ ಎಲ್ಲಾ ಜನರ ಬಾಹ್ಯ ಮತ್ತು ಆಂತರಿಕ ರಚನೆಯ ಏಕರೂಪತೆ ಅವರನ್ನು ಸೃಷ್ಟಿಸಿರುವುದು ಹಲವು ಶಕ್ತಿಗಳಲ್ಲ ಎನ್ನುವುದರ ಸಾಕ್ಷ್ಯವಾಗಿದೆ.

﴿وَإِذْ أَخَذَ رَبُّكَ مِنۢ بَنِىٓ ءَادَمَ مِن ظُهُورِهِمْ
ذُرِّيَّتَهُمْ وَأَشْهَدَهُمْ عَلَىٰٓ أَنفُسِهِمْ أَلَسْتُ بِرَبِّكُمْ
قَالُوا۟ بَلَىٰ شَهِدْنَآ أَن تَقُولُوا۟ يَوْمَ ٱلْقِيَٰمَةِ
إِنَّا كُنَّا عَنْ هَٰذَا غَٰفِلِينَ ﴿١٧٢﴾

“ನಿಮ್ಮ ಪ್ರಭು ಆದಮರ ಪೀಳಿಗೆಯಿಂದ ಅವರ ಸಂತತಿಯನ್ನು ಹೊರತಂದಿದ್ದ ಹಾಗೂ ಅವರನ್ನು ಸ್ವತಃ ಅವರ ಮೇಲೆ ಸಾಕ್ಷಿಗಳಾಗಿ ಮಾಡುತ್ತಾ, ನಾನು ನಿಮ್ಮ ಪ್ರಭುವಲ್ಲವೇ? ಎಂದು ಕೇಳಿದ್ದ ಸಂದರ್ಭವನ್ನು ನೆನಪಿಸಿರಿ. ಆಗ ಅವರು, ಹೌದು! ಖಂಡಿತವಾಗಿಯೂ ನೀನೇ ನಮ್ಮ ಪ್ರಭೂ. ನಾವು ಇದಕ್ಕೆ ಸಾಕ್ಷ್ಯ ವಹಿಸುತ್ತೇವೆ ಎಂದರು. ನೀವು ಪುನರುತ್ಥಾನ ದಿನದಂದು, ನಾವು ಈ ಬಗ್ಗೆ ಅಜ್ಞರಾಗಿದ್ದೆವು ಎಂದು ಹೇಳಿಬಿಡಬಾರದೆಂದು.” (7:172)

ಮೇಲೆ ವಿವರಿಸಿರುವುದು ಮಾನವ ಪ್ರಕೃತಿಯಲ್ಲೇ ಹುದುಗಿರುವ ಸತ್ಯಸಾಕ್ಷ್ಯದ ಕುರಿತಾಗಿದೆ. ಶುದ್ಧ ಮನಸ್ಸಿನ ಪ್ರತಿಯೊಬ್ಬ ವ್ಯಕ್ತಿ ನಾನು ಅದ್ವೇಗೋ ಉಂಟಾದವನಲ್ಲ, ಬದಲಾಗಿ ಸರ್ವಜ್ಞನೂ ಸರ್ವಶಕ್ತನೂ ಆದ ಸೃಷ್ಟಿಕರ್ತನು ಆಶ್ಚರ್ಯಕರವಾದ ರೀತಿಯಲ್ಲಿ ರೂಪಿಸಿದ್ದಾನೆ ಎಂಬ ಸತ್ಯವನ್ನು ಒಪ್ಪಿಕೊಳ್ಳುತ್ತಾನೆ. ಇಂತಹ ಒಂದು ಸಾಕ್ಷ್ಯವು ಮನುಷ್ಯ ವರ್ಗದ ಸಹಜ ಮತ್ತು ಸ್ವಾಭಾವಿಕವಾದ ಆದರ್ಶವನ್ನು ಪ್ರತಿನಿಧಿಸುತ್ತದೆ. ಈ ಆದರ್ಶದಿಂದ ವ್ಯತಿಚಲಿಸುವುದರಿಂದ ಅದು ಜನರ ಅಧಃಪತನ ಮತ್ತು ವಿನಾಶಕ್ಕೆ ಕಾರಣವಾಗುತ್ತದೆಯೆಂದು ಕುರ್‌ಆನ್ ಕಲಿಸಿಕೊಡುತ್ತದೆ.

ಮನುಷ್ಯನನ್ನು ಸೃಷ್ಟಿಸಿ ಅವನಿಗೆ ಜೀವನವನ್ನು ದಯಪಾಲಿಸಿದ ಪ್ರಪಂಚದೊಡೆಯನಿಂದ ಮಾರ್ಗದರ್ಶನವಾಗಿ ಬಂದ ಏಕೈಕ ದರ್ಶನ ಇಸ್ಲಾಮ್ ಮಾತ್ರವಾಗಿದೆ. ಈ ದರ್ಶನಕ್ಕೆ ಬದಲಾಗಿ ಮನುಕುಲವು ಅದರ ಬೆಳವಣಿಗೆಯ ವಿಭಿನ್ನ ಕಾಲಘಟ್ಟಗಳಲ್ಲಿ ಬೇರೆ ಬೇರೆ ವಿಶ್ವಾಸ, ಆದರ್ಶಗಳನ್ನು ಸ್ವೀಕರಿಸಿ ಅವಲಂಬಿಸಿದ್ದ ಸಹಜ ಆದರ್ಶದಿಂದ ವ್ಯತಿಚಲನೆಯಾಗಿದೆಂದು ಪವಿತ್ರ ಕುರ್‌ಆನ್ ಸ್ಪಷ್ಟಪಡಿಸಿದೆ. ಏಕದೇವ ಆದರ್ಶವನ್ನು ಸಹಜ ಮತ್ತು ಸ್ವಾಭಾವಿಕವಾದ ಒಂದು ವಿಶ್ವಾಸವಾಗಿ ಪರಿಚಯಿಸುವ ಕುರ್‌ಆನ್‌ಗೆ ಸಮಾನಾಂತರವಾದ ಇಂತಹ ಆದರ್ಶ ಘೋಷಣೆ ನಡೆಸುವ ಬೇರೊಂದು ಗ್ರಂಥ ಲೋಕದಲ್ಲಿಲ್ಲ.

### ಪ್ರಕೃತಿಯ ವಾಸ್ತವಿಕತೆ:

ಪ್ರಪಂಚದಲ್ಲಿರುವ ಯಾವ ವಸ್ತುವಿಗೂ ಸೃಷ್ಟಿಕರ್ತನ ನಿಯಂತ್ರಣದಿಂದ ಮುಕ್ತಗೊಂಡು ಬೇರೆಯಾಗಿ ನಿಲ್ಲಲು ಸಾಧ್ಯವಿಲ್ಲ. ಪ್ರತಿಯೊಂದು ವಸ್ತುವಿಗೂ ನಿಶ್ಚಯಿಸಲಾದ ಸಹಜ ಕಾರ್ಯಶೈಲಿ ಮತ್ತು ಗುಣಗಳನ್ನು ಮೀರುವುದು ಅಸಾಧ್ಯ. ಈ ವಿಷಯದಲ್ಲಿ ಇಚ್ಛಾಪೂರ್ವಕವೋ ಅನುದ್ದೇಶಿಕವಾಗಿಯೋ ಆಯ್ಕೆಯ ಸ್ವಾತಂತ್ರ್ಯ ಯಾವ ಸೃಷ್ಟಿಗೂ ಇಲ್ಲ. ಈ ಕಾರ್ಯದಲ್ಲಿ ಚೇತನ–ಅಚೇತನ, ಮನುಷ್ಯ–ಪ್ರಾಣಿಗಳೆಲ್ಲವೂ ಸಮಾನವಾಗಿದೆ. ಶುದ್ಧವಾದ ಬುದ್ಧಿ, ಚಿಂತನೆ, ವಿವೇಕ ಮತ್ತು ಮಿದುಳಿನ ಸಾಧ್ಯತೆಗಳನ್ನು ಉಪಯೋಗಿಸುವ ವಿಶಾಲವಾದ ಅವಕಾಶ ನೀಡಲ್ಪಟ್ಟಿರುವ ಮನುಷ್ಯರಿಗೆ ಕೂಡಾ ಯಾವುದೇ ರೀತಿಯ ಭಿನ್ನತೆಯನ್ನು ಹೊಂದಲು ಸಾಧ್ಯವಾಗದು.

ಸೃಷ್ಟಿಕರ್ತನು ಪ್ರತಿಯೊಂದು ಸೃಷ್ಟಿಗೂ ಅವುಗಳಿಗೆ ಹೊಂದುವ ಪ್ರಕೃತಿಯನ್ನು ದಯಪಾಲಿಸಿದ್ದಾನೆ. ಆದರೆ ಮನುಷ್ಯನಿಗೆ ಮಾತ್ರ ವಿವೇಕ ಹಾಗೂ ಆಯ್ಕೆಯ ಸ್ವಾತಂತ್ರ್ಯವನ್ನು ನೀಡಿದ್ದಾನೆ. ಮಾನವ

ಸೃಷ್ಟಿಯ ಉದ್ದೇಶ ಸೃಷ್ಟಿಕರ್ತನ ಆರಾಧನೆ ಮಾತ್ರವಾಗಿದೆ.

ಪವಿತ್ರ ಕುರ್‌ಆನ್ ಪ್ರತಿಯೊಂದು ವಸ್ತುವೂ ಮನುಷ್ಯನಿಗಾಗಿ ಸೃಷ್ಟಿಸಲ್ಪಟ್ಟಿದೆಯೆಂದು ಹೇಳುತ್ತದೆ. (2:29) ಸೃಷ್ಟಿಯ ವಿವಿಧ ಪಾರ್ಶ್ವಗಳಿಗೆ ಸಂಬಂಧಪಟ್ಟಂತೆ ಕುರ್‌ಆನ್ ನೀಡುವ ವಿವರಣೆ, ಜ್ಞಾನಗಳು ವಿಶ್ವಾಸ ದೃಢೀಕರಣಕ್ಕೆ ಸಹಾಯಕವಾಗಿದೆ ಎನ್ನುವುದರಲ್ಲಿ ಸಂಶಯವಿಲ್ಲ.

ಸೃಷ್ಟಿ ಮತ್ತು ಪ್ರಕೃತಿಯೊಂದಿಗೆ ಜೋಡಿಸಲ್ಪಟ್ಟ ಕೆಲವು ವಚನಗಳನ್ನು ನೋಡಿರಿ.

﴿إِنَّ فِى خَلْقِ ٱلسَّمَٰوَٰتِ وَٱلْأَرْضِ وَٱخْتِلَٰفِ ٱلَّيْلِ وَٱلنَّهَارِ وَٱلْفُلْكِ ٱلَّتِى تَجْرِى فِى ٱلْبَحْرِ بِمَا يَنفَعُ ٱلنَّاسَ وَمَآ أَنزَلَ ٱللَّهُ مِنَ ٱلسَّمَآءِ مِن مَّآءٍ فَأَحْيَا بِهِ ٱلْأَرْضَ بَعْدَ مَوْتِهَا وَبَثَّ فِيهَا مِن كُلِّ دَآبَّةٍ وَتَصْرِيفِ ٱلرِّيَٰحِ وَٱلسَّحَابِ ٱلْمُسَخَّرِ بَيْنَ ٱلسَّمَآءِ وَٱلْأَرْضِ لَءَايَٰتٍ لِّقَوْمٍ يَعْقِلُونَ ١٦٤﴾

"ಆಕಾಶ ಮತ್ತು ಭೂಮಿಯ ನಿರ್ಮಾಣದಲ್ಲಿ, ಇರುಳು ಮತ್ತು ಹಗಲುಗಳು ಒಂದರ ಹಿಂದೆ ಇನ್ನೊಂದರಂತೆ ನಿರಂತರವಾಗಿ ಬರುತ್ತಿರುವುದರಲ್ಲಿ, ಜನೋಪಯೋಗಿ ಸಾಮಗ್ರಿಗಳನ್ನು ಹೊತ್ತುಕೊಂಡು ಜಲಸಂಧಿಗಳಲ್ಲಿ ಸಂಚರಿಸುವ ನೌಕೆಗಳಲ್ಲಿ, ಅಲ್ಲಾಹನು ಆಕಾಶದಿಂದ ಸುರಿಸಿ ಅದರ ಮೂಲಕ ಭೂಮಿಯನ್ನು ನಿರ್ಜೀವಾವಸ್ಥೆಯ ಬಳಿಕ ಸಜೀವಗೊಳಿಸಿ, ಈ ವ್ಯವಸ್ಥೆಯ ಮೂಲಕ ಭೂಮಿಯಲ್ಲಿ ತರತರದ ಜೀವರಾಶಿಗಳು ಹರಡುವಂತೆ ಮಾಡಿದ ಮಳೆ ನೀರಿನಲ್ಲಿ, ಮಾರುತಗಳ ಚಲನೆಯಲ್ಲಿ ಹಾಗೂ ಆಕಾಶ ಮತ್ತು ಭೂಮಿಯ ನಡುವೆ ನಿಯಂತ್ರಿಸಲ್ಪಟ್ಟಿರುವ ಮೋಡಗಳಲ್ಲಿ ನಿಶ್ಚಯವಾಗಿಯೂ ವಿಚಾರವಂತರಿಗೆ ಅನೇಕಾನೇಕ ದೃಷ್ಟಾಂತಗಳಿವೆ." (2:164)

ಪ್ರಪಂಚದ ಪ್ರವೃತ್ತನ ರೀತಿಯ ಹಿಂದಿರುವ ಸೃಷ್ಟಿಕರ್ತನ ವೈಭವಪೂರ್ಣ ಪಾತ್ರವನ್ನು ನೆನಪಿಸಿಕೊಟ್ಟ ಬಳಿಕ ಅಲ್ಲಾಹನು ಸತ್ಯವಿಶ್ವಾಸ ಸ್ವೀಕರಿಸಬೇಕಾದ ಅನಿವಾರ್ಯತೆಯನ್ನು ಮನವರಿಕೆ ಮಾಡಿಕೊಡುತ್ತಾನೆ.

﴿هُوَ ٱلَّذِى جَعَلَ ٱلشَّمْسَ ضِيَآءً وَٱلْقَمَرَ نُورًا وَقَدَّرَهُۥ مَنَازِلَ لِتَعْلَمُوا۟ عَدَدَ ٱلسِّنِينَ وَٱلْحِسَابَ ۚ مَا خَلَقَ ٱللَّهُ ذَٰلِكَ إِلَّا بِٱلْحَقِّ ۚ يُفَصِّلُ ٱلْءَايَٰتِ لِقَوْمٍ يَعْلَمُونَ ٥ إِنَّ فِى ٱخْتِلَٰفِ ٱلَّيْلِ وَٱلنَّهَارِ وَمَا خَلَقَ ٱللَّهُ فِى ٱلسَّمَٰوَٰتِ وَٱلْأَرْضِ لَءَايَٰتٍ لِّقَوْمٍ يَتَّقُونَ ٦﴾

"ಸೂರ್ಯನನ್ನು ಪ್ರಕಾಶಮಾನವನ್ನಾಗಿ ಮಾಡಿದವನೂ ಚಂದ್ರನಿಗೆ ಹೊಳಪನ್ನು ಕೊಟ್ಟವನೂ ನೀವು ಸಂವತ್ಸರಗಳ ಎಣಿಕೆಗಳನ್ನು ದಿನಾಂಕಗಳ ಗಣನೆಯನ್ನೂ ತಿಳಿದುಕೊಳ್ಳಲಿಕ್ಕಾಗಿ ಅದಕ್ಕೆ ವೃದ್ಧಿ–ಕ್ಷಯಗಳ ಘಟ್ಟಗಳನ್ನು ಸರಿಯಾಗಿ ನಿರ್ಣಯಿಸಿ ಕೊಟ್ಟವನೂ ಅವನೇ. ಅಲ್ಲಾಹನು ಇವೆಲ್ಲವುಗಳನ್ನೂ ಸತ್ಯಪೂರ್ಣವಾಗಿಯೇ ಸೃಷ್ಟಿಸಿದನು. ಅವನು ಅರಿವುಳ್ಳವರಿಗೆ ತನ್ನ ದೃಷ್ಟಾಂತಗಳನ್ನು ವಿವರಿಸುತ್ತಾನೆ. ನಿಶ್ಚಯವಾಗಿಯೂ ರಾತ್ರಿ ಹಗಲುಗಳು ಒಂದನ್ನೊಂದು ಹಿಂಬಾಲಿಸಿಕೊಂಡು ಬರುವುದರಲ್ಲಿಯೂ ಅಲ್ಲಾಹನು ಭೂಮಿ–ಆಕಾಶಗಳಲ್ಲಿ ಸೃಷ್ಟಿಸಿರುವ ಪ್ರತಿಯೊಂದರಲ್ಲಿಯೂ ಹಲವು ನಿದರ್ಶನಗಳಿವೆ." (10:5-6)

﴿أَلَمْ تَرَ أَنَّ ٱللَّهَ خَلَقَ ٱلسَّمَٰوَٰتِ وَٱلْأَرْضَ بِٱلْحَقِّ ۚ إِن يَشَأْ يُذْهِبْكُمْ وَيَأْتِ بِخَلْقٍ جَدِيدٍ ١٩﴾

"ಅಲ್ಲಾಹು ಭೂಮಿ–ಆಕಾಶಗಳ ಸೃಷ್ಟಿಯನ್ನು ಸತ್ಯಪೂರ್ಣವಾಗಿ ನೆಲೆನಿಲ್ಲಿಸಿರುವುದನ್ನು ನೀವು ಕಾಣುವುದಿಲ್ಲವೇ? ಅವನು ಇಚ್ಛಿಸಿದರೆ ನಿಮ್ಮನ್ನು ಅಳಿಸಿ ಒಂದು ಹೊಸ ಸೃಷ್ಟಿಯನ್ನು ನಿಮ್ಮ ಸ್ಥಾನದಲ್ಲಿ ತರಬಲ್ಲನು." (14:19)

**ಪ್ರಕೃತಿಯ ಅನುಸರಣೆ:**

ಮನುಷ್ಯರು ಸೇರಿದಂತೆ ಪ್ರತಿಯೊಂದು ವಸ್ತುಗಳು ಹಾಗೂ ಜೀವಜಾಲಗಳು ಅವುಗಳ ಸ್ವಾಭಾವಿಕ ಸ್ವರೂಪ ಮತ್ತು ಜೈವಿಕ ಪ್ರಕೃತಿಯಲ್ಲಿ ನೆಲೆಗೊಂಡು ಅದಕ್ಕನುಗುಣವಾದ ರೀತಿಯಲ್ಲಿ ವರ್ತಿಸುತ್ತದೆ. ಒಬ್ಬ ಮನುಷ್ಯನು ಉಸಿರಾಡುವುದು ಅವನ ಸ್ವಂತ ಪ್ರವೃತ್ತನೆಯಲ್ಲ. ದೇಹದಲ್ಲಿ ನಡೆಯುತ್ತಿರುವ ಶ್ವಾಸೋಚ್ಛ್ವಾಸ ಪ್ರಕ್ರಿಯೆ ಹಾಗೂ ಅವುಗಳ ಪರಿಣಾಮಗಳು ಮನುಷ್ಯನ ಪ್ರವೃತ್ತನೆಯ ಫಲವಲ್ಲ. ಸೃಷ್ಟಿಕರ್ತನ ಸೃಷ್ಟಿ ವ್ಯವಸ್ಥೆಯ ಭಾಗಗಳಾಗಿ ಇಂತಹ

ಅದೆಷ್ಟೋ ಕಾರ್ಯಗಳಿವೆ.

ಪ್ರಪಂಚ, ಪ್ರಕೃತಿ ಮತ್ತು ಅವುಗಳಲ್ಲಿರುವ ವಸ್ತುಗಳಿಗೆ ಅಲ್ಲಾಹನು ನಿಶ್ಚಯಿಸಿದ ಸ್ವಭಾವಗಳ ಪ್ರಕಾರ ವರ್ತಿಸಿ ಸಾಗುತ್ತಿರುವುದನ್ನು ಪವಿತ್ರ ಕುರ್‌ಆನ್ ಇಸ್ಲಾಮ್ ಅಥವಾ ಅನುಸರಣೆ ಎಂದು ಕರೆದಿದೆ. ಅಂದರೆ ಪ್ರಪಂಚದಲ್ಲಿರುವ ಪ್ರತಿಯೊಂದು ಚರಾಚರಗಳು ಅಲ್ಲಾಹನು ನಿಶ್ಚಯಿಸಿದ ಪ್ರಕೃತಿಯಲ್ಲಿದೆ. ಉದಾ: ನೀರಿಗಿರುವ ಗುಣ ಕಲ್ಲಿಗಿಲ್ಲ. ನೀರು ಮತ್ತು ಕಲ್ಲಿನ ಪ್ರಕೃತಿ ಬೇರೆಯೇ ಆಗಿದೆ. ಹಾಗೆಯೇ ವಿವಿಧ ಬಗೆಯ ಹೂಗಿಡಗಳು, ತರಕಾರಿ ಬಳ್ಳಿಗಳು... ಯಾವುದಕ್ಕೆ ಯಾವ ಪ್ರಕೃತಿಯನ್ನು ನಿಶ್ಚಯಿಸಲಾಗಿದೆಯೋ ಅದರ ಸರಹದ್ದನ್ನು ಬಿಟ್ಟು ಅವುಗಳು ಮುಂದೆ ಸಾಗಲಾರವು.

ಈ ಎಲ್ಲಾ ವಸ್ತುಗಳಿಗೆ ವಿವೇಚನೆಯ ಸ್ವಾತಂತ್ರ್ಯವಿಲ್ಲ. ಅವುಗಳನ್ನು ಅಲ್ಲಾಹನು ಯಾವ ಪ್ರಕೃತಿಯಲ್ಲಿ ನೆಲೆಗೊಳಿಸಿದ್ದಾನೋ ಅದೇ ಪ್ರಕೃತಿಯಲ್ಲಿ ನೆಲೆಗೊಂಡಿರುತ್ತದೆ. ಆದರೆ ಮನುಷ್ಯನು ಮಾತ್ರ ಇದಕ್ಕೆ ಭಿನ್ನವಾಗಿದ್ದಾನೆ. ಆತನ ದೇಹದ ಎಲ್ಲಾ ಅವಯವಗಳು ದೇವ ನಿರ್ಣಿತ ಪ್ರಕೃತಿಯಲ್ಲಿರುವುದು ನಿಜ. ಶ್ವಾಸೋಚ್ಛ್ವಾಸ ಕ್ರಿಯೆ, ನಾಲಿಗೆಯ ಕಾರ್ಯ, ಜೀರ್ಣಾಂಗವ್ಯೂಹದ ಕೆಲಸ, ಮಿದುಳಿನ ಕಾರ್ಯವಿಧಾನ ಇವೆಲ್ಲವೂ ಅಲ್ಲಾಹನು ನಿಶ್ಚಯಿಸಿದ ಪ್ರಕೃತಿಯಲ್ಲಿ ನೆಲೆಗೊಂಡಿದೆ. ಇವುಗಳಿಗೆ ತಮಗೆ ಒಪ್ಪಿಸಿದ ಕಾರ್ಯಗಳನ್ನು ಮೀರಿಹೋಗಲು ಸಾಧ್ಯವಿಲ್ಲ. ಅಂದರೆ ಅವೆಲ್ಲವೂ ಅಲ್ಲಾಹನನ್ನು ಅನುಸರಿಸುವ 'ಮುಸ್ಲಿಮ್' ಆಗಿವೆ.

ಇನ್ನು ಈ ಲೋಕದಲ್ಲಿ ತಾನು ಮುಸ್ಲಿಮನಾಗಿ ಬಾಳಬೇಕೋ ಬೇಡವೋ ಎನ್ನುವ ವಿವೇಚನಾ ಸ್ವಾತಂತ್ರ್ಯವನ್ನು ಅಲ್ಲಾಹನು ಮನುಷ್ಯನಿಗೆ ನೀಡಿದ್ದಾನೆ. ಇದನ್ನು ಬಳಸಿಕೊಂಡು ತೀರ್ಮಾನಕ್ಕೆ ಬರುವ ಮೂಲಕ ಪ್ರಕೃತಿ ಧರ್ಮದ ಅನುಯಾಯಿಯಾಗುವ ಹೊಣೆಗಾರಿಕೆ ಮನುಷ್ಯನಿಗೆ ಒಪ್ಪಿಸಲಾಗಿದೆ. ಈ ಕುರಿತು ಪವಿತ್ರ ಕುರ್‌ಆನ್ ಹೇಳುವುದನ್ನು ನೋಡಿರಿ:

﴿أَفَغَيْرَ دِينِ ٱللَّهِ يَبْغُونَ وَلَهُۥٓ أَسْلَمَ
مَن فِى ٱلسَّمَٰوَٰتِ وَٱلْأَرْضِ طَوْعًا
وَكَرْهًا وَإِلَيْهِ يُرْجَعُونَ ﴿٨٣﴾﴾

“ಇವರೇನು ಅಲ್ಲಾಹನ ಅನುಸರಣಾ ರೀತಿಯನ್ನು (ಧರ್ಮ) ತ್ಯಜಿಸಿ ಬೇರೆ ಯಾವುದಾದರೂ ರೀತಿಯನ್ನನುಸರಿಸಲು ಇಷ್ಟಪಡುತ್ತಾರೆಯೋ? ವಸ್ತುತಃ ಆಕಾಶಗಳ ಮತ್ತು ಭೂಮಿಯ ಸಕಲ ವಸ್ತುಗಳು ಬಯಸಿಯೋ ಬಯಸದೆಯೋ ಅಲ್ಲಾಹನ ಆಜ್ಞಾಪಾಲಕಗಳಾಗಿ (ಮುಸ್ಲಿಮ್‌ಗಳಾಗಿ)ಯೇ ಇವೆ ಮತ್ತು ಸರ್ವರಿಗೂ ಅವನ ಕಡೆಗೇ ಮರಳಲಿಕ್ಕಿದೆ.” (3:83)

﴿تُسَبِّحُ لَهُ ٱلسَّمَٰوَٰتُ ٱلسَّبْعُ وَٱلْأَرْضُ وَمَن فِيهِنَّ
وَإِن مِّن شَىْءٍ إِلَّا يُسَبِّحُ بِحَمْدِهِۦ وَلَٰكِن لَّا تَفْقَهُونَ
تَسْبِيحَهُمْ إِنَّهُۥ كَانَ حَلِيمًا غَفُورًا ﴿٤٤﴾﴾

“ಸಪ್ತಗಗನಗಳೂ ಭೂಮಿಯೂ ಅವುಗಳಲ್ಲಿರುವ ಸಕಲ ವಸ್ತುಗಳೂ ಅವನ ಪಾವಿತ್ರ್ಯವನ್ನು ಕೊಂಡಾಡುತ್ತಿವೆ. ಅವನ ಪ್ರಶಂಸೆಯೊಂದಿಗೆ ಅವನ ತಸ್ಬೀಹ್ ಮಾಡದ ಯಾವ ವಸ್ತುವೂ ಇಲ್ಲ. ಆದರೆ ನೀವು ಅವುಗಳ ತಸ್ಬೀಹನ್ನು ಗ್ರಹಿಸುವುದಿಲ್ಲ. ವಾಸ್ತವದಲ್ಲಿ ಅವನು ಅತ್ಯಂತ ಸಹನಾಶೀಲನೂ ಕ್ಷಮಾಶೀಲನೂ ಆಗಿರುತ್ತಾನೆ.” (17:44)

﴿أَلَمْ تَرَ أَنَّ ٱللَّهَ يَسْجُدُ لَهُۥ مَن فِى ٱلسَّمَٰوَٰتِ
وَمَن فِى ٱلْأَرْضِ وَٱلشَّمْسُ وَٱلْقَمَرُ وَٱلنُّجُومُ
وَٱلْجِبَالُ وَٱلشَّجَرُ وَٱلدَّوَآبُّ وَكَثِيرٌ مِّنَ
ٱلنَّاسِ وَكَثِيرٌ حَقَّ عَلَيْهِ ٱلْعَذَابُ﴾

“ಆಕಾಶಗಳಲ್ಲಿಯೂ ಭೂಮಿಯಲ್ಲಿಯೂ ಇರುವ ಸಕಲವೂ ಸೂರ್ಯ, ಚಂದ್ರ, ನಕ್ಷತ್ರಗಳೂ, ಪರ್ವತಗಳೂ, ಮರಗಳೂ, ಪ್ರಾಣಿಗಳೂ, ಅನೇಕ ಮನುಷ್ಯರೂ ಶಿಕ್ಷೆಗೆ ಅರ್ಹರಾಗಿರುವ ಅನೇಕರೂ ಅಲ್ಲಾಹನ ಮುಂದೆ ಸಾಷ್ಟಾಂಗವೆರಗುತ್ತಿರುವುದನ್ನು ನೀವು ನೋಡಿಲ್ಲವೇ?” (22:18)

ಪ್ರಕೃತಿಯಲ್ಲಿರುವ ವಸ್ತುಗಳೆಲ್ಲವೂ ಅವುಗಳ ಪ್ರಕೃತಿ ಮತ್ತು ಸ್ವಭಾವಕ್ಕನುಸಾರ ಸೃಷ್ಟಿಕರ್ತನ ನಿಯಮಗಳು ಅಥವಾ ಪ್ರಾಪಂಚಿಕ ವ್ಯವಸ್ಥೆಯನ್ನು ಅನುಸರಿಸುತ್ತದೆ ಹಾಗೂ ಅವುಗಳಿಗೆ ನಿಶ್ಚಯಿಸಿದ ಪರಿಧಿಯನ್ನು ಮೀರಲು ಸಾಧ್ಯವಿಲ್ಲವೆಂದು ಮೇಲಿನ ಸೂಕ್ತವು ಸೂಚಿಸುತ್ತದೆ. ಅವುಗಳು ಹೇಗೆ ತಸ್ಬೀಹ್ ಮಾಡುತ್ತಿವೆ ಎನ್ನುವುದು ನಮಗೆ ಅಜ್ಞಾತವಾಗಿದೆ. ಉದ್ದೇಶಪೂರ್ವಕವಾಗಿ ಕೃತಘ್ನರಾಗುವುದು ಇಚ್ಛಾಸ್ವಾತಂತ್ರ್ಯವನ್ನು ನೀಡಿದ ಮನುಷ್ಯರು ಮತ್ತು ಜಿನ್ನ್‌ಗಳಾಗಿದ್ದಾರೆ.

*29 ನೇ ಪುಟಕ್ಕೆ*

# ಹತ್ತು ವಸಿಯ್ಯತ್‌ಗಳು

✍ ಶೈಖ್ ಮುಹಮ್ಮದ್ ಇಬ್ನ್ ಸಾಲಿಹ್ ಅಲ್‌ಉಸೈಮೀನ್

## ಎಂಟನೇ ಮತ್ತು ಒಂಬತ್ತನೇ ವಸಿಯ್ಯತ್

﴿وَإِذَا قُلْتُمْ فَٱعْدِلُوا۟ وَلَوْ كَانَ ذَا قُرْبَىٰ ۖ وَبِعَهْدِ ٱللَّهِ أَوْفُوا۟ ۚ ذَٰلِكُمْ وَصَّىٰكُم بِهِۦ لَعَلَّكُمْ تَذَكَّرُونَ ١٥٢﴾

“ನೀವು ಮಾತನಾಡುವಾಗ ನ್ಯಾಯ ಪಾಲಿಸಿರಿ. ಅದು ನಿಮ್ಮ ನಿಕಟ ಸಂಬಂಧಿಕನಾದರೂ ಸರಿ. ಅಲ್ಲಾಹನ ಕರಾರುಗಳನ್ನು ನೆರವೇರಿಸಿರಿ. ಇದು ಅವನು ನಿಮಗೆ ನೀಡುವ ವಸಿಯ್ಯತ್‌ಗಳಾಗಿವೆ. ನೀವು ಚಿಂತಿಸುವುದಕ್ಕಾಗಿ.” (ಕುರ್‌ಆನ್ 6:152)

ಮಾತನಾಡುವಾಗ ನ್ಯಾಯ ಪಾಲಿಸುವುದು ಕಡ್ಡಾಯವಾಗಿದೆ. ಯಾವುದೇ ಕೆಲಸ ಮಾಡುವಾಗ ನ್ಯಾಯ ಪಾಲಿಸುವುದು ಕೂಡ ಕಡ್ಡಾಯವಾಗಿದೆ. ಅದು ಹತ್ತಿರದ ಸಂಬಂಧಿಕನಾದರೂ ಸರಿ.

ಉದಾಹರಣೆಗೆ, ನಿಮ್ಮ ತಂದೆ ನಿಮಗೆ ಅತಿ ಹತ್ತಿರದ ಸಂಬಂಧಿ. ತಂದೆ ಒಬ್ಬ ವ್ಯಕ್ತಿಗೆ ಅನ್ಯಾಯ ಮಾಡಿದರೆ ನೀವು ತಂದೆಯೊಡನೆ ನೀವು ಅನ್ಯಾಯ ಮಾಡಿದ್ದೀರಿ ಎಂದು ಹೇಳುತ್ತೀರಾ? ನೀವು ಹೇಳಬೇಕು. ಅದು ನ್ಯಾಯಪಾಲಿಸುವುದಾಗಿದೆ. ನೀವು ಮಾತನಾಡುವಾಗ ನ್ಯಾಯ ಪಾಲಿಸಬೇಕು. ಅದು ನಿಕಟ ಸಂಬಂಧಿಕನಾದರೂ ಸರಿ.

ನಿಮ್ಮ ಆಪ್ತ ಗೆಳೆಯ ತಪ್ಪು ಮಾಡಿದರೆ ನೀನು ತಪ್ಪು ಮಾಡಿದ್ದೀ ಎಂದು ನೀವು ನಿಮ್ಮ ಗೆಳೆಯನೊಡನೆ ಹೇಳುತ್ತೀರಾ? ಹೇಳಬೇಕು. ಕಾರಣ ಅಲ್ಲಾಹು(ﷻ) ಹೇಳುತ್ತಾನೆ:

﴿وَإِذَا قُلْتُمْ فَٱعْدِلُوا۟ وَلَوْ كَانَ ذَا قُرْبَىٰ﴾

“ನೀವು ಮಾತನಾಡುವಾಗ ನ್ಯಾಯ ಪಾಲಿಸಿರಿ. ಅದು ನಿಮ್ಮ ನಿಕಟ ಸಂಬಂಧಿಕನಾದರೂ ಸರಿ.” (ಕುರ್‌ಆನ್ 6:152)

﴿وَبِعَهْدِ ٱللَّهِ أَوْفُوا۟ ۚ ذَٰلِكُمْ وَصَّىٰكُم بِهِۦ﴾

“ಅಲ್ಲಾಹನ ಕರಾರುಗಳನ್ನು ನೆರವೇರಿಸಿರಿ. ಇದು ಅವನು ನಿಮಗೆ ನೀಡುವ ವಸಿಯ್ಯತ್‌ಗಳಾಗಿವೆ.” (ಕುರ್‌ಆನ್ 6:152)

ಅಲ್ಲಾಹನ(ﷻ) ಕರಾರು ಎಂದರೆ ಅಲ್ಲಾಹು ಆಜ್ಞಾಪಿಸಿದ ಮತ್ತು ವಿರೋಧಿಸಿದ ಕಾರ್ಯಗಳು. ಅಲ್ಲಾಹನ ಆಜ್ಞೆಗಳು ಮತ್ತು ವಿರೋಧಗಳನ್ನು ಪಾಲಿಸಿ ಜೀವಿಸುವವರಿಗೆ ಪ್ರತಿಫಲ ನೀಡುತ್ತೇನೆಂದು ಅಲ್ಲಾಹು(ﷻ) ವಾಗ್ದಾನ ಮಾಡಿದ್ದಾನೆ. ಅಲ್ಲಾಹು(ﷻ) ಹೇಳುತ್ತಾನೆ:

﴿۞ وَلَقَدْ أَخَذَ ٱللَّهُ مِيثَٰقَ بَنِىٓ إِسْرَٰٓءِيلَ وَبَعَثْنَا مِنْهُمُ ٱثْنَىْ عَشَرَ نَقِيبًا ۖ وَقَالَ ٱللَّهُ إِنِّى مَعَكُمْ ۖ لَئِنْ أَقَمْتُمُ ٱلصَّلَوٰةَ وَءَاتَيْتُمُ ٱلزَّكَوٰةَ وَءَامَنتُم بِرُسُلِى وَعَزَّرْتُمُوهُمْ وَأَقْرَضْتُمُ ٱللَّهَ قَرْضًا حَسَنًا

لَأُكَفِّرَنَّ عَنكُمْ سَيِّـَٔاتِكُمْ وَلَأُدْخِلَنَّكُمْ جَنَّٰتٍ تَجْرِى مِن تَحْتِهَا ٱلْأَنْهَٰرُ

"ಅಲ್ಲಾಹು ಬನೂ ಇಸ್ರಾಈಲರಿಂದ ಕರಾರನ್ನು ಪಡೆದನು. ನಾವು ಅವರಿಂದಲೇ ಅವರಿಗೆ ಹನ್ನೆರಡು ನಾಯಕರನ್ನು ನೇಮಿಸಿದೆವು. ಅಲ್ಲಾಹು ಹೇಳಿದನು: ನಾನು ನಿಮ್ಮ ಜೊತೆಗಿದ್ದೇನೆ. ನೀವು ನಮಾಝ್ ಸಂಸ್ಥಾಪಿಸಿ, ಝಕಾತ್ ನೀಡಿ, ನನ್ನ ಸಂದೇಶವಾಹಕರಲ್ಲಿ ವಿಶ್ವಾಸವಿಟ್ಟು, ಅವರಿಗೆ ಬೆಂಬಲ ನೀಡಿ, ಅಲ್ಲಾಹನಿಗೆ ಉತ್ತಮ ಸಾಲವನ್ನು ನೀಡಿದರೆ ನಾನು ಖಂಡಿತ ನಿಮ್ಮ ಪಾಪಗಳನ್ನು ಅಳಿಸಿಹಾಕುವೆನು ಮತ್ತು ತಳಭಾಗದಿಂದ ನದಿಗಳು ಹರಿಯುವ ಸ್ವರ್ಗೋದ್ಯಾನಗಳಲ್ಲಿ ನಿಮ್ಮನ್ನು ಖಂಡಿತ ಪ್ರವೇಶ ಮಾಡಿಸುವೆನು." (ಕುರ್‌ಆನ್ 5:12)

ಈ ಸಮುದಾಯದ ಬಗ್ಗೆ ಅಲ್ಲಾಹು(ﷻ) ಹೇಳುತ್ತಾನೆ:

يَٰٓأَيُّهَا ٱلَّذِينَ ءَامَنُوا۟ هَلْ أَدُلُّكُمْ عَلَىٰ تِجَٰرَةٍ تُنجِيكُم مِّنْ عَذَابٍ أَلِيمٍ ﴿١٠﴾ تُؤْمِنُونَ بِٱللَّهِ وَرَسُولِهِۦ وَتُجَٰهِدُونَ فِى سَبِيلِ ٱللَّهِ بِأَمْوَٰلِكُمْ وَأَنفُسِكُمْ ۚ ذَٰلِكُمْ خَيْرٌ لَّكُمْ إِن كُنتُمْ تَعْلَمُونَ ﴿١١﴾ يَغْفِرْ لَكُمْ ذُنُوبَكُمْ وَيُدْخِلْكُمْ جَنَّٰتٍ تَجْرِى مِن تَحْتِهَا ٱلْأَنْهَٰرُ وَمَسَٰكِنَ طَيِّبَةً فِى جَنَّٰتِ عَدْنٍ ۚ ذَٰلِكَ ٱلْفَوْزُ ٱلْعَظِيمُ ﴿١٢﴾

"ಓ ಸತ್ಯವಿಶ್ವಾಸಿಗಳೇ! ಯಾತನಾಮಯ ಶಿಕ್ಷೆಯಿಂದ ನಿಮ್ಮನ್ನು ಪಾರು ಮಾಡುವ ಒಂದು ವ್ಯಾಪಾರದ ಬಗ್ಗೆ ನಾನು ನಿಮಗೆ ತಿಳಿಸಿಕೊಡಲೇ? ನೀವು ಅಲ್ಲಾಹನಲ್ಲಿ ವಿಶ್ವಾಸವಿಟ್ಟು ನಿಮ್ಮ ಸಂಪತ್ತು ಮತ್ತು ಶರೀರಗಳ ಮೂಲಕ ಅಲ್ಲಾಹನ ಮಾರ್ಗದಲ್ಲಿ ಹೋರಾಡಬೇಕು. ನೀವು ತಿಳುವಳಿಕೆಯುಳ್ಳವರಾಗಿದ್ದರೆ ಅದು ನಿಮಗೆ ಉತ್ತಮವಾಗಿದೆ. ನೀವು ಹೀಗೆ ಮಾಡಿದರೆ ಅವನು ನಿಮ್ಮ ಪಾಪಗಳನ್ನು ಕ್ಷಮಿಸಿ ತಳಭಾಗದಿಂದ ನದಿಗಳು ಹರಿಯುವ ಸ್ವರ್ಗೋದ್ಯಾನಗಳಿಗೆ ಮತ್ತು ಶಾಶ್ವತ ವಾಸಕ್ಕಿರುವ ವಿಶಿಷ್ಟ ಭವನಗಳಿಗೆ ನಿಮ್ಮನ್ನು ಪ್ರವೇಶ ಮಾಡಿಸುವನು. ಅದೇ ಮಹಾ ವಿಜಯ." (ಕುರ್‌ಆನ್ 61:10–12)

ಅಲ್ಲಾಹನಲ್ಲಿ ವಿಶ್ವಾಸವಿಟ್ಟು ಅವನ ಮಾರ್ಗದಲ್ಲಿ ಹೋರಾಡುವವರ ಪಾಪಗಳನ್ನು ಕ್ಷಮಿಸಿ ಅವರನ್ನು ತಳಭಾಗದಿಂದ ನದಿಗಳು ಹರಿಯುವ ಸ್ವರ್ಗೋದ್ಯಾನಗಳಲ್ಲಿ ಸೇರಿಸುವೆನೆಂದು ಅಲ್ಲಾಹು ಕರಾರು ಮಾಡಿದ್ದಾನೆ.

ಬನೂ ಇಸ್ರಾಈಲರ ಬಗ್ಗೆ ಅಲ್ಲಾಹು(ﷻ) ಹೇಳುತ್ತಾನೆ:

وَأَوْفُوا۟ بِعَهْدِىٓ أُوفِ بِعَهْدِكُمْ

"ನೀವು ನನ್ನೊಂದಿಗೆ ಮಾಡಿದ ಕರಾರನ್ನು ಪಾಲಿಸಿದರೆ ನಾನು ನಿಮ್ಮೊಂದಿಗೆ ಮಾಡಿದ ಕರಾರನ್ನು ಪಾಲಿಸುವೆನು." (ಕುರ್‌ಆನ್ 2:40)

ಅಲ್ಲಾಹನ ಆಜ್ಞಾಪಾಲನೆ ಮಾಡುತ್ತಾ ಜೀವಿಸುವೆನೆಂದು ನೀವು ಅಲ್ಲಾಹನೊಂದಿಗೆ ಕರಾರು ಮಾಡಿಕೊಂಡಿದ್ದೀರಿ. ಆ ಕರಾರನ್ನು ನೀವು ನೆರವೇರಿಸಬೇಕಾಗಿದೆ. (ಇನ್ನೂ ಇದೆ)

*27 ನೇ ಪುಟದಿಂದ*

## ಇಸ್ಲಾಮ್ ಪ್ರಕೃತಿ ವಿರುದ್ಧ ಧರ್ಮವೇ?

**ಇಸ್ಲಾಮ್ ಪ್ರಕೃತಿಧರ್ಮವಾಗಿದೆ:**

ಎಲ್ಲಾ ವಸ್ತು, ಜೀವಜಾಲಗಳ ರಚನೆಯಲ್ಲಿ ಸೃಷ್ಟಿಕರ್ತನು ಅನುಸರಣೆಯ ಎರಡು ಸ್ತರಗಳನ್ನು ವ್ಯವಸ್ಥೆಗೊಳಿಸಿಟ್ಟಿದ್ದಾನೆ. ಒಂದು ಸೃಷ್ಟಿಪರವಾದ ರಚನೆಯಿಂದ ಬಿಂಬಿತವಾಗುವ ಅಪ್ರಜ್ಞಾಪೂರ್ವಕವಾದ ಅನುಸರಣೆ. ಎರಡು ಆಯ್ಕೆಯ ಸ್ವಾತಂತ್ರ್ಯವನ್ನು ಬಳಸಿಕೊಂಡು ಬಿಂಬಿತವಾಗುವ ಪ್ರಜ್ಞಾಪೂರ್ವಕ ಅನುಸರಣೆ. ಪವಿತ್ರ ಕುರ್‌ಆನಿನ 3:83 ರಲ್ಲಿ ವಿವರಿಸಿದ ಪ್ರಜ್ಞಾಪೂರ್ವಕ (ತೌಅನ್) ಅನುಸರಣೆ ಹಾಗೂ ಅಪ್ರಜ್ಞಾಪೂರ್ವಕವಾದ ನಿರ್ಬಂಧಿತ ಅನುಸರಣೆ (ಕರ್ಹನ್) ಇದಕ್ಕೆ ಪುರಾವೆಯಾಗಿದೆ.

ದೈವಿಕ ನಿಯಮಗಳನ್ನು ಅಂಗೀಕರಿಸಿ ಅನುಸರಿಸುವ ಮೂಲಕ ಸೃಷ್ಟಿಕರ್ತನ ಇಚ್ಛೆಗನುಸಾರ ಜೀವಿಸಲು ತೀರ್ಮಾನಿಸಿದರೆ ಮಾತ್ರ ಅವನು ಯಥಾರ್ಥ ಮುಸ್ಲಿಮನಾಗುತ್ತಾನೆ. ಇಸ್ಲಾಮ್ ಎಲ್ಲಾ ರೀತಿಯಲ್ಲಿಯೂ ಮಾನವ ಪ್ರಕೃತಿಗೆ ಪೂರಕವಾದ ಧರ್ಮವಾಗಿದೆ. ಅದು ಮಾತ್ರ ಮನುಷ್ಯನಿಗೆ ಪ್ರಾಯೋಗಿಕ ಮತ್ತು ನೇರವಾದ ಮಾರ್ಗದರ್ಶನವನ್ನು ನೀಡುತ್ತದೆ. ಪ್ರಪಂಚದ ಪ್ರವೃತ್ತನ ರೀತಿಯನ್ನು ನಿಶ್ಚಯಿಸಿದ ಅಲ್ಲಾಹನು ಮನುಷ್ಯನ ಪ್ರಕೃತಿಗೆ ಪೂರಕವಾದ ಧರ್ಮ ಯಾವುದೆಂದು ಚೆನ್ನಾಗಿ ಬಲ್ಲನು. ■

# ಆದ್ ಸಮುದಾಯದ ಪತನ

ಲಾ ಇಲಾಹ ಇಲ್ಲಲ್ಲಾಹು ಮುಹಮ್ಮದುರ್ರಸೂಲುಲ್ಲಾಹಿ ಎಂದು ಹೇಳಿದ ಹಲವರು ಇಂದು ಪ್ರವಾದಿಗಳ ವೈಶಿಷ್ಟತೆಗಳನ್ನು ಅರಗಿಸಿಕೊಳ್ಳಲು ಸಾಧ್ಯವಾಗದೆ ಅವುಗಳಿಗೆಲ್ಲ ಹೊಸ ವ್ಯಾಖ್ಯಾನಗಳನ್ನು ನೀಡಿ ನಾವು ಆಧುನಿಕರು ಹಾಗೂ ಬುದ್ಧಿಗೆ ಗ್ರಾಹ್ಯವಾದುದನ್ನು ಮಾತ್ರ ಒಪ್ಪಿಕೊಳ್ಳುವವರಾಗಿದ್ದೇವೆಂದು ಬಿಂಬಿಸಿಕೊಳ್ಳುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಪ್ರವಾದಿಗಳ ಮೂಲಕ ಅಲ್ಲಾಹನು ಪ್ರಕಟಪಡಿಸಿದ ಅದ್ಭುತ ದೃಷ್ಟಾಂತಗಳನ್ನು ಹಾಗೆಯೇ ಅಂಗೀಕರಿಸುವವರು ಇವರ ದೃಷ್ಟಿಯಲ್ಲಿ ಕಾಲದೊಂದಿಗೆ ಹೆಜ್ಜೆ ಹಾಕದ ಪ್ರತಿಗಾಮಿಗಳು!

﴿وَيَٰقَوۡمِ ٱسۡتَغۡفِرُواْ رَبَّكُمۡ ثُمَّ تُوبُوٓاْ إِلَيۡهِ يُرۡسِلِ ٱلسَّمَآءَ عَلَيۡكُم مِّدۡرَارٗا وَيَزِدۡكُمۡ قُوَّةً إِلَىٰ قُوَّتِكُمۡ وَلَا تَتَوَلَّوۡاْ مُجۡرِمِينَ ٥٢﴾

“ಓ ನನ್ನ ಜನಾಂಗದವರೇ! ನಿಮ್ಮ ಪ್ರಭುವಿನ ಕ್ಷಮೆ ಯಾಚಿಸಿರಿ ಮತ್ತು ಪಶ್ಚಾತ್ತಾಪಪಟ್ಟು ಆತನ ಕಡೆಗೆ ಮರಳಿರಿ. ಅವನು ನಿಮ್ಮ ಮೇಲೆ ಆಕಾಶದಿಂದ ಧಾರಾಕಾರವಾಗಿ ಮಳೆ ಸುರಿಸುವನು ಮತ್ತು ನಿಮ್ಮ ಈಗಿನ ಶಕ್ತಿಗೆ ಇನ್ನಷ್ಟು ಶಕ್ತಿಯನ್ನು ವರ್ಧಿಸಿ ಕೊಡುವನು. ನೀವು ಅಪರಾಧಿಗಳಾಗಿ ವಿಮುಖರಾಗಬೇಡಿರಿ.” (11:52)

ಅಲ್ಲಾಹನೊಂದಿಗೆ ಕ್ಷಮೆ ಯಾಚಿಸಿ ಪಶ್ಚಾತ್ತಾಪಪಟ್ಟುಕೊಳ್ಳುವುದರಲ್ಲಿ ಬಹಳ ಮಹತ್ವವಿದೆಯೆಂದು ಪ್ರವಾದಿಗಳು ಅವರವರ ಸಮುದಾಯದೊಂದಿಗೆ ಈ ಕಾರ್ಯವನ್ನು ಹೇಳಿರುವುದರಲ್ಲಿ ನಮಗೆ ಸ್ಪಷ್ಟವಾಗುತ್ತದೆ. ಒಬ್ಬ ದಾಸನು ಕ್ಷಮಾಯಾಚನೆ ಮತ್ತು ಪಶ್ಚಾತ್ತಾಪದ ಮೂಲಕ ತನ್ನ ಪ್ರಭುವಿಗೆ ಸಮೀಪವಾಗುತ್ತಾನೋ ಅವನು ಅಲ್ಲಾಹನ ಸಂಪ್ರೀತ ದಾಸನಾಗುತ್ತಾನೆ. ಇನ್‌ಶಾ ಅಲ್ಲಾಹ್. ಪಾಪ ವಿಮೋಚನೆ ಅರಸುವವನ ಕುರಿತು ಪ್ರವಾದಿ(ﷺ) ರವರು ಹೇಳಿರುವುದನ್ನು ನೋಡಿರಿ:

“ಒಬ್ಬನು ಪಾಪ ವಿಮೋಚನೆಯ ಪ್ರಾರ್ಥನೆಯನ್ನು ರೂಢಿಸಿಕೊಂಡರೆ ಅವನಿಗೆ ಅಲ್ಲಾಹನು ಎಲ್ಲಾ ಸಂಕಷ್ಟಗಳಿಂದ ಮುಕ್ತನಾಗುವ ಒಂದು ದಾರಿ, ಎಲ್ಲಾ ನೋವಿನಿಂದ ಒಂದು ವಿದಾಯ ಹಾಗೂ ಅವನು ನಿರೀಕ್ಷಿಸಿರದ ಮಾರ್ಗದ ಮೂಲಕ ಉಪಜೀವನವನ್ನು ದಯಪಾಲಿಸುತ್ತಾನೆ.” (ಅಬೂದಾವೂದ್)

ಪ್ರವಾದಿ(ﷺ) ರವರು ಪ್ರತಿದಿನ ನೂರಕ್ಕಿಂತಲೂ ಹೆಚ್ಚು ಬಾರಿ ಅಲ್ಲಾಹನೊಂದಿಗೆ ಪಾಪ ವಿಮೋಚನೆಗಾಗಿ ಪ್ರಾರ್ಥಿಸಿ ಪಶ್ಚಾತ್ತಾಪಪಟ್ಟು ಮರಳುತ್ತಿದ್ದರು. ಪಾಪ ವಿಮೋಚನೆ ಮತ್ತು ಪಶ್ಚಾತ್ತಾಪದ ಅದೆಷ್ಟೋ ಪ್ರಾರ್ಥನೆಗಳು ಪವಿತ್ರ ಕುರ್‌ಆನ್ ಹಾಗೂ ಹದೀಸ್‌ನಲ್ಲಿ ನಾವು ನೋಡಬಹುದಾಗಿದೆ. ಮನಪೂರ್ವಕ ಪಶ್ಚಾತ್ತಾಪಪಟ್ಟು ಪ್ರಾರ್ಥಿಸಬೇಕು.

﴿قَالَ قَدۡ وَقَعَ عَلَيۡكُم مِّن رَّبِّكُمۡ رِجۡسٞ وَغَضَبٌۖ أَتُجَٰدِلُونَنِي فِيٓ أَسۡمَآءٖ سَمَّيۡتُمُوهَآ أَنتُمۡ وَءَابَآؤُكُم مَّا نَزَّلَ ٱللَّهُ بِهَا مِن سُلۡطَٰنٖۚ فَٱنتَظِرُوٓاْ إِنِّي مَعَكُم مِّنَ ٱلۡمُنتَظِرِينَ ٧١﴾

“ಹೂದ್ ಹೇಳಿದರು: ನಿಮ್ಮ ಮೇಲೆ ಪ್ರಭುವಿನ ಶಾಪ ಬಿದ್ದಿತು ಮತ್ತು ಅವನ ಕ್ರೋಧವೆರಗಿತು. ಅಲ್ಲಾಹನು ಯಾವ ಆಧಾರ ಪ್ರಮಾಣಗಳನ್ನು ಇಳಿಸದಿರುವ, ನೀವು ಮತ್ತು ನಿಮ್ಮ ಪೂರ್ವಿಕರು ಇಟ್ಟುಕೊಂಡಂತಹ ಹೆಸರುಗಳ ಬಗ್ಗೆ ನೀವು ನನ್ನೊಂದಿಗೆ ಜಗಳವಾಡುತ್ತೀರಾ? ನೀವು ಕಾದುಕೊಂಡಿರಿ. ನಾನೂ ನಿಮ್ಮೊಂದಿಗೆ ಕಾದಿರುತ್ತೇನೆ.” (7:71)

ಅವರು ಸ್ವದಾ, ಸ್ವಮೂದ್, ಹಬಾಅ್ ಮುಂತಾದ ವಿಗ್ರಹಗಳನ್ನು ಆರಾಧಿಸುತ್ತಿದ್ದರು. ಹೂದರು ಇವುಗಳಾವುದನ್ನೂ ಆರಾಧಿಸಬೇಡಿರಿ ಮತ್ತು ಇವುಗಳಾವುದಕ್ಕೂ ಪ್ರಮಾಣವಿಲ್ಲವೆಂದು ಕಾರ್ಯಕಾರಣ ಸಮೇತ ವಿವರಿಸಿಕೊಟ್ಟರೂ ಆ ಜನರು ತಮ್ಮ ಕೃತ್ಯದಿಂದ ಹಿಂದೆ ಸರಿಯಲಿಲ್ಲ. ಅವರು ಶಕ್ತಿ ಮತ್ತು ಸಾಮರ್ಥ್ಯದಿಂದ ಸೌಧಗಳು ಹಾಗೂ ಪಿಲ್ಲರ್‌ಗಳ ಸಹಾಯದಿಂದ ಬೃಹತ್ ಕಟ್ಟಡಗಳನ್ನು ನಿರ್ಮಿಸಿದ್ದರು. ಅದು ಅವರ ಅಹಂಕಾರ ಮತ್ತು ದರ್ಪದ ಹೆಗ್ಗುರುತಾಗಿತ್ತು. ಹೂದ್(عليه السلام) ಅವರೊಂದಿಗೆ ಕೇಳಿದರು:

﴿ أَتَبۡنُونَ بِكُلِّ رِيعٍ ءَايَةٗ تَعۡبَثُونَ ١٢٨
وَتَتَّخِذُونَ مَصَانِعَ لَعَلَّكُمۡ تَخۡلُدُونَ ١٢٩ ﴾

“ಇದೇನು ನೀವು ಪ್ರತಿಯೊಂದು ಉನ್ನತ ಸ್ಥಳದಲ್ಲಿ ವೃಥಾ ಗೋಪುರಗಳನ್ನು ಕಟ್ಟುತ್ತೀರಿ ಮತ್ತು ನಿಮಗೆ ಸದಾ ಇಲ್ಲೇ ಉಳಿಯಲಿಕ್ಕಿದೆಯೋ ಎಂಬಂತೆ ದೊಡ್ಡ ದೊಡ್ಡ ಸೌಧಗಳನ್ನು ನಿರ್ಮಿಸುತ್ತೀರಿ?” (26:128-129)

﴿ وَإِذَا بَطَشۡتُم بَطَشۡتُمۡ جَبَّارِينَ ١٣٠
فَٱتَّقُواْ ٱللَّهَ وَأَطِيعُونِ ١٣١ ﴾

“ನೀವು ಯಾರ ಮೇಲಾದರೂ ಕೈಹಾಕುವಾಗ ಮದವೇರಿದವರಂತೆ ಕೈಹಾಕುತ್ತೀರಿ. ನೀವು ಅಲ್ಲಾಹನನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ.” (26:130-131)

ಅಹಂಕಾರ ಮತ್ತು ಬಡಾಯಿಕೋರರಾಗಿದ್ದ ಅವರೊಂದಿಗೆ ಹೂದರು ನಿಮಗೆ ಆರೋಗ್ಯ ಹಾಗೂ ಸಾಮರ್ಥ್ಯವನ್ನು ದಯಪಾಲಿಸಿ ಅಲ್ಲಾಹನ ಭಯವಿರಿಸಿಕೊಂಡು ಅವನ ಸಂದೇಶವಾಹಕರಾದ ನನ್ನನ್ನು ಅನುಸರಿಸಿ ಎಂದು ಉಪದೇಶಿಸಿದರು. ಆದರೆ ಅವರು ಅದಕ್ಕೆ ಕಿವಿಗೊಡಲಿಲ್ಲ. ಅವರು ಹೂದರಿಗೆ ಯಾವ ರೀತಿಯ ಪ್ರತಿಕ್ರಿಯೆ ನೀಡಿದರೆಂದು ಕುರ್‌ಆನ್ ವಿವರಿಸುವುದನ್ನು ನೋಡಿರಿ.

﴿ قَالُوٓاْ أَجِئۡتَنَا لِنَعۡبُدَ ٱللَّهَ وَحۡدَهُۥ
وَنَذَرَ مَا كَانَ يَعۡبُدُ ءَابَآؤُنَا فَأۡتِنَا بِمَا
تَعِدُنَآ إِن كُنتَ مِنَ ٱلصَّٰدِقِينَ ٧٠ ﴾

“ಅವರು ಹೇಳಿದರು: ನಾವು ಏಕಮಾತ್ರ ಅಲ್ಲಾಹನನ್ನು ಆರಾಧಿಸಬೇಕು ಮತ್ತು ನಮ್ಮ ಪೂರ್ವಿಕರು ಆರಾಧಿಸುತ್ತಿದ್ದವರನ್ನು ಬಿಟ್ಟುಬಿಡಬೇಕೆಂದು ನೀನು ನಮ್ಮ ಬಳಿಗೆ ಬಂದಿರುವೆಯಾ? ನೀನು ಹೇಳುವುದು ಸತ್ಯವಾಗಿದ್ದರೆ ನೀನು ನಮಗೆ ಬೆದರಿಕೆ ಹಾಕುತ್ತಿರುವ ಆ ಶಿಕ್ಷೆಯನ್ನು ತಂದು ಬಿಡು.” (7:70)

﴿ قَالُواْ يَٰهُودُ مَا جِئۡتَنَا بِبَيِّنَةٖ وَمَا نَحۡنُ بِتَارِكِيٓ
ءَالِهَتِنَا عَن قَوۡلِكَ وَمَا نَحۡنُ لَكَ بِمُؤۡمِنِينَ ٥٣ ﴾

“ಅವರು ಹೇಳಿದರು: ಓ ಹೂದ್! ನೀವು ನಮ್ಮ ಬಳಿಗೆ ಪ್ರತ್ಯಕ್ಷ ಪ್ರಮಾಣ ತರಲಿಲ್ಲ. ನಿಮ್ಮ ಮಾತನ್ನು ಕೇಳಿ ನಾವು ನಮ್ಮ ದೇವರುಗಳನ್ನು ತ್ಯಜಿಸಲಾರೆವು ಮತ್ತು ನಿಮ್ಮ ಮೇಲೆ ವಿಶ್ವಾಸವಿಡಲಾರೆವು.” (11:53)

﴿ وَقَالَ ٱلۡمَلَأُ مِن قَوۡمِهِ ٱلَّذِينَ كَفَرُواْ وَكَذَّبُواْ
بِلِقَآءِ ٱلۡأٓخِرَةِ وَأَتۡرَفۡنَٰهُمۡ فِي ٱلۡحَيَوٰةِ ٱلدُّنۡيَا مَا
هَٰذَآ إِلَّا بَشَرٞ مِّثۡلُكُمۡ يَأۡكُلُ مِمَّا تَأۡكُلُونَ مِنۡهُ
وَيَشۡرَبُ مِمَّا تَشۡرَبُونَ ٣٣ وَلَئِنۡ أَطَعۡتُم
بَشَرٗا مِّثۡلَكُمۡ إِنَّكُمۡ إِذٗا لَّخَٰسِرُونَ ٣٤ ﴾

“ಸತ್ಯವನ್ನು ನಿಷೇಧಿಸಿದವರೂ ಪರಲೋಕದ ಭೇಟಿಯನ್ನು ಸುಳ್ಳಾಗಿಸಿದವರೂ ಲೌಕಿಕ ಜೀವನದಲ್ಲಿ ನಾವು ಸಂಪನ್ನಗೊಳಿಸಿದವರೂ ಆದ ಆ ಜನಾಂಗದ ಸರದಾರರು ಹೀಗೆ ಹೇಳತೊಡಗಿದರು. ಈತನು ನಿಮ್ಮಂತೆಯೇ ಇರುವ ಒಬ್ಬ ಮಾನವನಲ್ಲದೆ ಬೇರೇನೂ ಅಲ್ಲ. ನೀವು ತಿನ್ನುವುದನ್ನೇ ಇವನೂ ತಿನ್ನುತ್ತಾನೆ. ನೀವು ಕುಡಿಯುವುದನ್ನೇ ಇವನೂ ಕುಡಿಯುತ್ತಾನೆ. ನೀವು ನಿಮ್ಮಂತೆಯೇ ಇರುವ ಒಬ್ಬ ಮಾನವನ ಅನುಕರಣೆಯನ್ನು ಸ್ವೀಕರಿಸಿದರೆ ನೀವು ನಷ್ಟದಲ್ಲೇ

ಇರುವಿರಿ.” (23:33-34)

ನೀನು ನಮ್ಮ ಪೂರ್ವಿಕರೆಲ್ಲರೂ ಆರಾಧಿಸುತ್ತಿದ್ದ ಈ ಆರಾಧ್ಯರನ್ನು ತೊರೆಯಲು ತಕ್ಕುದಾದ ಪುರಾವೆಗಳನ್ನು ತಂದಿಲ್ಲವಷ್ಟೆ. ನಾವು ತಿನ್ನುವಂತೆ ತಿನ್ನುವ ಹಾಗೂ ನಾವು ಕುಡಿಯುವಂತೆ ಕುಡಿಯುವ ನಮ್ಮಿಂದ ಯಾವುದೇ ವ್ಯತ್ಯಾಸವಿರದ ನಿನ್ನ ಮಾತು ಕೇಳಿ ನಾವು ನಮ್ಮ ವಿಶ್ವಾಸವನ್ನು ತೊರೆದರೆ ನಾವು ನಷ್ಟಕ್ಕೊಳಪಡುವುದರಿಂದ ನಾವು ಅದಕ್ಕೆ ಸಿದ್ಧರಿಲ್ಲವೆಂದು ಘೋಷಿಸಿಬಿಟ್ಟರು.

﴿قَالُوا سَوَاءٌ عَلَيْنَا أَوَعَظْتَ أَمْ لَمْ تَكُن مِّنَ الْوَاعِظِينَ ﴿١٣٦﴾ إِنْ هَٰذَا إِلَّا خُلُقُ الْأَوَّلِينَ ﴿١٣٧﴾﴾

“ಅವರು ಹೇಳಿದರು: ನೀನು ಉಪದೇಶ ಮಾಡಿದರೂ ಮಾಡದಿದ್ದರೂ ನಮ್ಮ ಮಟ್ಟಿಗೆ ಎಲ್ಲಾ ಸಮಾನ. ಈ ವಿಷಯಗಳೆಲ್ಲ ಹಿಂದಿನಿಂದಲೂ ಹೀಗೆಯೇ ನಡೆಯುತ್ತಾ ಬಂದಿದೆ. ನಾವು ಶಿಕ್ಷಿಸಲ್ಪಡುವವರಲ್ಲ.” (26:136-137)

ಜನರ ಪೈಕಿ ಹಲವರು ಇಂದಿಗೂ ಪುರಾವೆಗಳನ್ನು ಆಲಿಸಿದರೂ ಹೀಗೆನ್ನುತ್ತಾರೆ: ನಾವು ನಮ್ಮ ಉಸ್ತಾದರುಗಳು ಹೇಳಿಕೊಟ್ಟಿರುವುದನ್ನು ಹಾಗೂ ನಮ್ಮ ಹಿರಿಯರ ನಡವಳಿಕೆಗಳನ್ನು ಮಾತ್ರ ಅನುಸರಿಸುತ್ತೇವೆ. ವಾಸ್ತವದಲ್ಲಿ ಇದು ಪ್ರವಾದಿಗಳ ವಾರೀಸುದಾರರ ನಿಲುವಲ್ಲ. ಬದಲಾಗಿ ಅವರ ಶತ್ರುಗಳ ನಿಲುವಾಗಿದೆಯೆಂದು ನಾವು ತಿಳಿದುಕೊಳ್ಳಬೇಕಾಗಿದೆ.

ಆದ್ ಸಮುದಾಯವು ಹೂದರನ್ನು ಶಕ್ತಿ ಮತ್ತು ಆರೋಗ್ಯದ ಹೆಸರಲ್ಲಿ ಅಹಂಕಾರದ ಮಾತುಗಳನ್ನು ಹೇಳಿ ವಿರೋಧಿಸಿದಾಗ ಹೂದರು ಅವರಿಗೆ ಹೀಗೆ ಉತ್ತರವಿತ್ತರು:

﴿فَأَمَّا عَادٌ فَاسْتَكْبَرُوا فِي الْأَرْضِ بِغَيْرِ الْحَقِّ وَقَالُوا مَنْ أَشَدُّ مِنَّا قُوَّةً ۖ أَوَلَمْ يَرَوْا أَنَّ اللَّهَ الَّذِي خَلَقَهُمْ هُوَ أَشَدُّ مِنْهُمْ قُوَّةً ۖ وَكَانُوا بِآيَاتِنَا يَجْحَدُونَ ﴿١٥﴾﴾

“ಆದ್ ಜನಾಂಗದವರು ಯಾವ ಹಕ್ಕೂ ಇಲ್ಲದೆ ಭೂಮಿಯಲ್ಲಿ ಅಹಂಕಾರಪಡುತ್ತಿದ್ದರು. ನಮಗಿಂತ ಶಕ್ತಿಶಾಲಿಗಳು ಯಾರಿದ್ದಾರೆ ಎನ್ನತೊಡಗಿದರು. ಅವರನ್ನು ಸೃಷ್ಟಿಸಿದ ಅಲ್ಲಾಹ್ ಅವರಿಗಿಂತ ಎಷ್ಟೋ ಅಧಿಕ ಶಕ್ತಿಶಾಲಿಯೆಂದು ಅವರಿಗೆ ಹೊಳೆಯಲಿಲ್ಲವೇ? ಅವರು ನಮ್ಮ ಸೂಕ್ತಗಳನ್ನು ನಿರಾಕರಿಸುತ್ತಲೇ ಇದ್ದರು.” (41:15)

ಅವರು ಹೂದರಿಗೆ ಅದೆಷ್ಟು ಬೆದರಿಕೆಯನ್ನೊಡ್ಡಿದರೂ ಅವರನ್ನು ಸಂದೇಶಪ್ರಚಾರ ಮಾರ್ಗದಿಂದ ತಡೆಯಲಾಗಲಿಲ್ಲ. ಅವರು ಆ ಮಾರ್ಗದಲ್ಲಿ ಧೈರ್ಯದಿಂದ ಸ್ಥಿರವಾಗಿ ನೆಲೆಗೊಂಡರು. ಕುರ್‌ಆನ್ ಹೇಳುವುದನ್ನು ನೋಡಿರಿ:

﴿إِن نَّقُولُ إِلَّا اعْتَرَاكَ بَعْضُ آلِهَتِنَا بِسُوءٍ ۗ قَالَ إِنِّي أُشْهِدُ اللَّهَ وَاشْهَدُوا أَنِّي بَرِيءٌ مِّمَّا تُشْرِكُونَ ﴿٥٤﴾ مِن دُونِهِ ۖ فَكِيدُونِي جَمِيعًا ثُمَّ لَا تُنظِرُونِ ﴿٥٥﴾ إِنِّي تَوَكَّلْتُ عَلَى اللَّهِ رَبِّي وَرَبِّكُم ۚ مَّا مِن دَابَّةٍ إِلَّا هُوَ آخِذٌ بِنَاصِيَتِهَا ۚ إِنَّ رَبِّي عَلَىٰ صِرَاطٍ مُّسْتَقِيمٍ ﴿٥٦﴾ فَإِن تَوَلَّوْا فَقَدْ أَبْلَغْتُكُم مَّا أُرْسِلْتُ بِهِ إِلَيْكُمْ ۚ وَيَسْتَخْلِفُ رَبِّي قَوْمًا غَيْرَكُمْ وَلَا تَضُرُّونَهُ شَيْئًا ۚ إِنَّ رَبِّي عَلَىٰ كُلِّ شَيْءٍ حَفِيظٌ ﴿٥٧﴾﴾

“ನಿಮ್ಮ ಮೇಲೆ ನಮ್ಮ ಆರಾಧ್ಯರುಗಳ ಪೈಕಿ ಯಾರದೇ ಶಾಪ ಬಿದ್ದಿದೆಯೆಂದು ನಾವು ತಿಳಿಯುತ್ತೇವೆ. ಹೂದ್ ಹೇಳಿದರು: ನಾನು ಅಲ್ಲಾಹನ ಸಾಕ್ಷ್ಯವನ್ನು ಮುಂದಿರಿಸುತ್ತೇನೆ. ನೀವು ಅಲ್ಲಾಹನ ಹೊರತು ದೇವತ್ವದಲ್ಲಿ ಭಾಗೀದಾರರನ್ನಾಗಿಸಿಕೊಂಡಿರುವ ಇತರರಿಂದ ನಾನು ಮುಕ್ತನಾಗಿದ್ದೇನೆಂಬ ಬಗ್ಗೆ ನೀವು ಸಾಕ್ಷಿಯಾಗಿರಿ. ನೀವೆಲ್ಲರೂ ಸೇರಿ ನನ್ನ ವಿರುದ್ಧ ಕಾರ್ಯಾಚರಣೆಯಲ್ಲಿ ಯಾವುದೇ ಕೊರತೆ ಮಾಡಬೇಡಿರಿ ಮತ್ತು ನನಗೆ ಕಿಂಚಿತ್ತೂ ಕಾಲಾವಕಾಶ ಕೊಡಬೇಡಿ. ನಾನು ನನ್ನ ಪ್ರಭುವೂ ನಿಮ್ಮ ಪ್ರಭುವೂ ಆಗಿರುವ ಅಲ್ಲಾಹನ ಮೇಲೆ ಭರವಸೆ ಇಟ್ಟಿದ್ದೇನೆ. ಯಾವ ಜೀವಿಯೂ ಅವನ ನಿಯಂತ್ರಣದಿಂದ ಹೊರತಾಗಿಲ್ಲ. ನಿಶ್ಚಯವಾಗಿಯೂ ನನ್ನ ಪ್ರಭು ನೇರಮಾರ್ಗದಲ್ಲಿದ್ದಾನೆ. ನೀವು ವಿಮುಖರಾಗುವುದಾದರೆ ಆಗಿರಿ. ನಾನು ಯಾವ ಸಂದೇಶವನ್ನು ಕೊಟ್ಟು ನಿಮ್ಮ ಬಳಿಗೆ ಕಳುಹಿಸಲ್ಪಟ್ಟಿದ್ದೆನೋ ಅದನ್ನು ನಾನು ನಿಮಗೆ ತಲುಪಿಸಿಬಿಟ್ಟಿದ್ದೇನೆ. ಇನ್ನು ನನ್ನ ಪ್ರಭು ನಿಮ್ಮ ಸ್ಥಾನದಲ್ಲಿ ಇನ್ನೊಂದು ಜನಾಂಗವನ್ನು ಎಬ್ಬಿಸುವನು. ನೀವು ಅವನಿಗೆ ಯಾವ ಹಾನಿಯನ್ನೂ ಮಾಡಲಾರಿರಿ. ನಿಶ್ಚಯವಾಗಿಯೂ ನನ್ನ ಪ್ರಭು ಸಕಲ ವಸ್ತುಗಳ ಸಂರಕ್ಷಕನು.” (11:54-57)

ಓ ಹೂದ್! ನಿನಗೆ ಈಗ ನಮ್ಮ ಯಾವುದೇ ಕೆಲವು ದೇವರುಗಳ ಶಾಪ ತಟ್ಟಿದೆ. ಇನ್ನು ಎಲ್ಲರ ಶಾಪ ತಟ್ಟಿದರೆ ನಿನ್ನ ಪರಿಸ್ಥಿತಿ ಏನಾಗಬಹುದು?

ಹೀಗೆಲ್ಲ ಹೇಳಿಕೊಂಡು ಅವರು ಹೂದರನ್ನು ಭಯಪಡಿಸಲು ಪ್ರಯತ್ನಿಸಿದರು. ಆದರೆ ಹೂದರು ಅವರ ಇಂತಹ ಮಾತುಗಳಿಗೆ ಸೊಪ್ಪು ಹಾಕದೆ ತಮ್ಮ ಪಥದಲ್ಲಿ ಮುನ್ನಡೆದರು. ನೀವು ಅಲ್ಲಾಹನನನ್ನು ಬಿಟ್ಟು ಆರಾಧಿಸುವ ಎಲ್ಲಾ ಆರಾಧ್ಯರಿಂದ ನಾನು ಮುಕ್ತನಾಗಿದ್ದೇನೆ. ನನ್ನ ಆರಾಧನೆ ಮತ್ತು ವಿಧೇಯತೆ ಅವನಿಗೆ ಮಾತ್ರ ಮೀಸಲು. ಅವನನ್ನು ಹೊರತುಪಡಿಸಿ ನೀವು ಆರಾಧಿಸುವ ಯಾವುದಕ್ಕೂ ನನಗೆ ಒಳಿತನ್ನಾಗಲಿ ಕೇಡನ್ನಾಗಲಿ ಮಾಡಲು ಸಾಧ್ಯವಿಲ್ಲ. ನೀವು ಮತ್ತು ನಿಮ್ಮ ಆರಾಧ್ಯರು ನನ್ನ ವಿರುದ್ಧ ಏನಾದರೂ ಕಾರ್ಯವೆಸಗುವುದಾದರೆ ಅದನ್ನು ಆದಷ್ಟು ಬೇಗ ಮಾಡಿ ಮುಗಿಸಿರಿ. ನಾನು ನನ್ನ ಮತ್ತು ನಿಮಮ ಪ್ರಭುವಾದ ಅಲ್ಲಾಹನ ಮೇಲೆ ಭರವಸೆ ಇಟ್ಟು ಜೀವಿಸುವವನಾಗಿದ್ದೇನೆ. ಆದುದರಿಂದ ಆ ನನ್ನ ಪ್ರಭು ನನಗಾಗಿ ತೀರ್ಮಾನಿಸಿದ ಕಾರ್ಯದ ವಿರುದ್ಧ ನಿಮಗೆ ಏನೂ ಮಾಡಲು ಸಾಧ್ಯವಿಲ್ಲ. ಅವನ ಮೇಲೆ ದೃಢವಿಶ್ವಾಸವಿಟ್ಟುಕೊಳ್ಳುವವರನ್ನು ಅವನು ಪರಾಜಿತರನ್ನಾಗಿ ಮಾಡುವುದಿಲ್ಲ. ಅವನು ಖಂಡಿತವಾಗಿಯೂ ನನಗೆ ಸಹಾಯ ಮಾಡುತ್ತಾನೆ. ಅಲ್ಲಾಹನು ನ್ಯಾಯಾಧಿಪತಿಯಾಗಿದ್ದಾನೆ. ಅವನು ತನ್ನ ದಾಸರ ಮೇಲೆ ಯಾವತ್ತೂ ಅನ್ಯಯವೆಸಗುವವನನಲ್ಲ. ಅಲ್ಲಾಹನು ಅವನನ್ನು ಧಿಕ್ಕರಿಸುವವರಿಗೆ ಸಹಾಯವಾಗಿ, ಅವನನ್ನು ಅನುಸರಿಸುವವರನ್ನು ಕಷ್ಟಕ್ಕೆ ಗುರಿಪಡಿಸುವುವವನಲ್ಲ. ಆದುದರಿಂದ ನೀವು ಅಲ್ಲಾಹನನ್ನು ಹೊರತುಪಡಿಸಿ ಕರೆದು ಪ್ರಾರ್ಥಿಸುವುದರಿಂದ ನಾನು ಮುಕ್ತನಾಗಿರುವೆನು. ನೀವು ಮಾಡುವ ಶಿರ್ಕ್‌ನಲ್ಲಿ ನನ್ನ ಯಾವ ಪಾತ್ರವೂ ಇಲ್ಲ. ಅಲ್ಲಾಹನು ನಿಮಗಾಗಿ ತಲುಪಿಸಲು ಒಪ್ಪಿಸಿದ ಹೊಣೆಗಾರಿಕೆಯನ್ನು ನಾನು ನಿರ್ವಹಿಸದ್ದೇನೆ. ನೀವು ಅದನ್ನು ಸ್ವೀಕರಿಸದೆ ವಿಮುಖರಾದರೆ ಅಲ್ಲಾಹನು ಆ ಜಾಗದಲ್ಲಿ ಬೇರೊಂದು ಜನತೆಯನ್ನು ನೆಲೆಗೊಳಿಸುವನು... ಎಂದು ಪ್ರವಾದಿ ಹೂದ್(عليه السلام) ರು ಅವರೊಂದಿಗೆ ಧೈರ್ಯವಾಗಿ ಘೋಷಿಸಿದರು.

* * * * *

ಇಸ್ಲಾಮಿನ ಸಂದೇಶ ಪ್ರಚಾರ ನಡೆಸುವವರನ್ನು ವಿರೋಧಿಗಳು ತಡೆಯಲು ಪ್ರಯತ್ನಿಸುವ ಸಂದರ್ಭದಲ್ಲೂ ಅವರು ಎಲ್ಲಾ ಅಡೆ–ತಡೆಗಳನ್ನು ಮೆಟ್ಟಿ ನಿಂತು ತಮ್ಮ ಪಥದಲ್ಲಿ ಧೈರ್ಯದಿಂದ ಮುನ್ನಡೆಯಬೇಕು.

ಹೂದ್(عليه السلام) ರು ತನ್ನೊಂದಿಗೆ ವೈರತ್ವ ಪ್ರಕಟಿಸಿದ ಜನಾಂಗಕ್ಕೆ ನೀಡಿದ ಉತ್ತರವನ್ನು ನಾವು ತಿಳಿದುಕೊಂಡೆವು. ಪ್ರವಾದಿ ನೂಹ್ (عليه السلام) ಕೂಡಾ ಇದೇ ರೀತಿಯ ಉತ್ತರವನ್ನು ತಮ್ಮ ಸಮುದಾಯಕ್ಕೆ ನೀಡಿದ್ದರೆಂದು ಕುರ್‌ಆನ್‌ನಿಂದ ವ್ಯಕ್ತವಾಗುತ್ತದೆ.

﴿ وَٱتۡلُ عَلَيۡهِمۡ نَبَأَ نُوحٍ إِذۡ قَالَ لِقَوۡمِهِۦ يَٰقَوۡمِ إِن كَانَ كَبُرَ عَلَيۡكُم مَّقَامِي وَتَذۡكِيرِي بِـَٔايَٰتِ ٱللَّهِ فَعَلَى ٱللَّهِ تَوَكَّلۡتُ فَأَجۡمِعُوٓاْ أَمۡرَكُمۡ وَشُرَكَآءَكُمۡ ثُمَّ لَا يَكُنۡ أَمۡرُكُمۡ عَلَيۡكُمۡ غُمَّةٗ ثُمَّ ٱقۡضُوٓاْ إِلَيَّ وَلَا تُنظِرُونِ ٧١ ﴾

“(ಪ್ರವಾದಿಯವರೇ) ಇವರಿಗೆ ನೂಹರ ಸಮಾಚಾರ ತಿಳಿಸಿರಿ. ಅವರು ತಮ್ಮ ಜನಾಂಗಕ್ಕೆ ಹೇಳಿದ ವೃತ್ತಾಂತ: ಓ ನನ್ನ ಜನರೇ! ನಿಮ್ಮ ನಡುವೆ ನನ್ನ ಇರುವಿಕೆಯೂ ಅಲ್ಲಾಹನ ವಚನಗಳನ್ನು ಹೇಳಿ ನಿಮ್ಮನ್ನು ಅಲಕ್ಷ್ಯಭಾವದಿಂದ ಎಚ್ಚರಗೊಳಿಸುವುದೂ ನಿಮಗೆ ಅಸಹನೀಯವಾಗುವುದಾದರೆ ನನ್ನ ಭರವಸೆ ಅಲ್ಲಾಹನ ಮೇಲಿದೆ. ನೀವು ಸ್ವಯಂ ನಿಶ್ಚಯಿಸಿಕೊಂಡಿರುವ ಸಹಭಾಗಿಗಳನ್ನು ಜತೆಗೂಡಿಸಿಕೊಂಡು ಒಂದು ಒಮ್ಮತದ ನಿರ್ಧಾರವನ್ನು ಮಾಡಿಕೊಳ್ಳಿರಿ. ನಿಮ್ಮ ಮುಂದಿರುವ ಯೋಜನೆಯ ಯಾವ ಅಂಶವೂ ನಿಮ್ಮ ದೃಷ್ಟಿಯಿಂದ ಮರೆಯಾಗಿ ಹೋಗದಂತೆ ಅದರ ಬಗ್ಗೆ ಚೆನ್ನಾಗಿ ವಿವೇಚಿಸಿಕೊಳ್ಳಿರಿ. ಅನಂತರ ಅದನ್ನು ನನ್ನ ವಿರುದ್ಧ ಕಾರ್ಯಾಚರಣೆಗೆ ತನ್ನಿರಿ ಮತ್ತು ನನಗೆ ಸಮಯಾವಕಾಶ ಕೊಡಲೇ ಬೇಡಿರಿ.” (10:71)

ಅಲ್ಲಾಹನ ಮಾರ್ಗದಲ್ಲಿ ಜೀವಿಸುವ ಓರ್ವ ಸತ್ಯವಿಶ್ವಾಸಿ ಯಾವ ಪ್ರತಿಕೂಲ ಸನ್ನಿವೇಶವನ್ನು ಎದುರಿಸಿದರೂ ಧೃತಿಗೆಡದೆ ಸತ್ಯವನ್ನು ಬಹಿರಂಗವಾಗಿ ಹೇಳುವ ನಿಶ್ಚಯದಾರ್ಢ್ಯತೆಗೆ ಈ ಮಹಾತ್ಮರ ಚರಿತ್ರೆ ಪ್ರೇರಣೆಯಾಗಬೇಕು. ಅದಕ್ಕೆ ಪೂರಕವಾದ ಪ್ರವಾದಿ (ﷺ) ರವರ ಒಂದು ವಚನವನ್ನು ಇಲ್ಲಿ ಉಲ್ಲೇಖಿಸುವುದು ಸಂದರ್ಭೋಚಿತವೆನಿಸುತ್ತದೆ.

“ನೀನು ತಿಳಿದಿರಬೇಕು. ಒಂದು ಸಮಗ್ರ ಸಮುದಾಯವೂ ನಿನಗೆ ಒಂದು ಒಳಿತು ಮಾಡಲು ಒಗ್ಗೂಡಿದರೂ ಅಲ್ಲಾಹನು ಅದನ್ನು ನಿನಗಾಗಿ ಲಿಖಿತಗೊಳಿಸಿಟ್ಟಿರದಿದ್ದರೆ ಅವರು ನಿನಗೆ ಯಾವ ಒಳಿತನ್ನೂ ಉಂಟು ಮಾಡಲಾರರು. ಇನ್ನು ಒಂದು ಜನಾಂಗವು ನನಗೆ ಒಂದು ಕೇಡು ಉಂಟು ಮಾಡಲು ಒಟ್ಟು ಸೇರಿದರೂ ಅಲ್ಲಾಹನು ಅದನ್ನು ನಿನಗಾಗಿ ದಾಖಲಿಸಿಟ್ಟರದಿದ್ದರೆ ಅವರು ನಿನಗೆ ಯಾವ ಕೇಡನ್ನೂ ಮುಟ್ಟಿಸಲಾರರು.” (ತಿರ್ಮುದಿ)

ನಮಗೆ ಮನೆಯವರು, ಕುಟುಂಬದ ಸದಸ್ಯರು, ಊರಿನವರು ಅಥವಾ ಅಧಿಕಾರಿಗಳಿಂದ ಏನಾದರೂ ಬಹಿಷ್ಕಾರ ಅಥವಾ ಮರ್ದನಗಳು ನಡೆದರೆ ನಾವು ನಮಗಿಂತ ಮುಂಚೆ ಗತಿಸಿಹೊದ

ಬೆಳ್ಳಿ ನಕ್ಷತ್ರಗಳಾದ ಸಂದೇಶವಾಹಕರು ಮತ್ತು ಅವರನ್ನು ಅನುಗಮಿಸಿದ ಸಚ್ಚರಿತರ ಮಾರ್ಗವನ್ನು ಅನುಸರಿಸಬೇಕು. ಸಂದೇಶ ಪ್ರಚಾರದ ಕಾರ್ಯಕ್ಕೆ ಅನುಕೂಲಕರವಾದ ಪರಿಸ್ಥಿತಿ ಇದ್ದರೂ ನಿಸ್ಸಾರವಾದ ಕಾರ್ಯವನ್ನು ಮುಂದೊಡ್ಡಿ ಕುಟುಂಬ ಮತ್ತು ಸಮುದಾಯಕ್ಕೆ ಸತ್ಯದ ಸಂದೇಶವನ್ನು ತಲುಪಿಸದಿರುವುದು ಸರಿಯಲ್ಲ. ಅಲ್ಪಸಂಖ್ಯೆಯ ಅನುಯಾಯಿಗಳು ಲಭಿಸಿದ್ದರೂ (ಅದು ಕೂಡಾ ದುರ್ಬಲರು) ಯಾವುದೇ ಭಯ, ಆತಂಕಗಳಿಲ್ಲದೆ ಸತ್ಯವನ್ನು ಬಹಿರಂಗವಾಗಿ ಹೇಳಿದ ಪೂರ್ವಿಕರಾದ ಪ್ರವಾದಿಗಳು ಮುಸ್ಲಿಮರಿಗೆ ಆದರ್ಶಪ್ರಾಯರಾಗಬೇಕು. ಇವೆಲ್ಲವೂ ಅವರಿಗೆ ಸಾಧ್ಯವಾದದ್ದು ಅಲ್ಲಾಹನ ಮೇಲಿರುವ ಅರ್ಪಣಾಮನೋಭಾವ ಮತ್ತು ಶುಭ ಪ್ರತೀಕ್ಷೆಯಾಗಿತ್ತು.

ಅಲ್ಲಾಹನ ಧರ್ಮವನ್ನು ಪ್ರಚುರಪಡಿಸುವಾಗ ಪ್ರಬೋಧಿತ ಸಮುದಾಯದಿಂದ ಅನುಕೂಲಕರ ಹಾಗೂ ಪ್ರತಿಕೂಲಕರ ಪ್ರತಿಕ್ರಿಯೆಗಳು ವ್ಯಕ್ತವಾಗಬಹುದೆಂದು ಪ್ರಚಾರಕನು ಮೊದಲು ಅರಿತುಕೊಳ್ಳಬೇಕು. ಪ್ರತಿಕ್ರಿಯೆ ಯಾವುದೇ ರೀತಿಯಲ್ಲಿದ್ದರೂ, ಎಲ್ಲವೂ ಅಲ್ಲಾಹನ ತೀರ್ಮಾನ ಪ್ರಕಾರವೇ ಘಟಿಸುತ್ತದೆಯೆಂದು ತಿಳಿದುಕೊಂಡು ಅವನಲ್ಲಿ ಭರವಸೆ ಇಟ್ಟುಕೊಂಡು ತನ್ನ ವಿಶ್ವಾಸವನ್ನು ವರ್ಧಿಸಿಕೊಳ್ಳಲು ಸಾಧ್ಯವಾಗುವಂತೆ ಸಂದೇಶ ಪ್ರಚಾರಕನು ವಿಜಯಿಯಾಗುತ್ತಾನೆ. ನಮ್ಮ ಮಟ್ಟಿಗೆ ಪ್ರತಿಕ್ರಿಯೆ ಸಕರಾತ್ಮಕವಾಗಿದ್ದರೂ ನಾವೇಕೆ ದುಃಖಿಸಬೇಕು? ಅಲ್ಲಾಹನು ಹೇಳುವುದನ್ನು ನೋಡಿರಿ:

﴿ قُلْ لَنْ يُصِيبَنَا إِلَّا مَا كَتَبَ اللَّهُ لَنَا هُوَ مَوْلَانَا ۚ وَعَلَى اللَّهِ فَلْيَتَوَكَّلِ الْمُؤْمِنُونَ ٥١ ﴾

“ಹೇಳಿರಿ: ಅಲ್ಲಾಹನು ನಮಗಾಗಿ ಲಿಖಿತಗೊಳಿಸಿದುದರ ಹೊರತು (ಒಳಿತು ಅಥವಾ ಕೆಡುಕು) ನಮ್ಮನ್ನು ಬಾಧಿಸುವುದಿಲ್ಲ. ಅಲ್ಲಾಹನೇ ನಮ್ಮ ಮಾಲಿಕನಾಗಿರುತ್ತಾನೆ. ಸತ್ಯವಿಶ್ವಾಸಿಗಳು ಅವನ ಮೇಲೆಯೇ ಭರವಸೆಯನ್ನಿಡಬೇಕು.“ (9:51)

“ಅವನನ್ನು ಬಿಟ್ಟು ಬೇರೆ ಯಾರನ್ನೂ ನಾನು ಪರಿಗಣಿಸುವುದಿಲ್ಲ. ಅವನಲ್ಲದೆ ನಾನು ಯಾರ ಮೇಲೆಯೂ ಭರವಸೆ ಇಡುವುದಿಲ್ಲ. ಅವನನ್ನು ಮಾತ್ರವಲ್ಲದೆ ಬೇರೆ ಯಾರನ್ನೂ ನಾನು ಆರಾಧಿಸುವುದಿಲ್ಲ.” (ಕಸಸುಲ್ ಅಂಬಿಯಾ ಇಬ್ನ್ ಕಸೀರ್)

ಇದು ಹೂದ್(عليه السلام) ರು ಅಲ್ಲಾಹನ ಮೇಲೆ ಭರವಸೆ ಇಟ್ಟುಕೊಂಡು ಜನರನ್ನು ಎದುರಿಸಿದಾಗ ಹೇಳಿದ ವಚನವನ್ನು ವಿವರಿಸುತ್ತಾ ಇಬ್ನ್ ಕಸೀರ್ ಹೇಳಿದ ಮಾತಾಗಿದೆ.

ಅಲ್ಲಾಹನು ಪರಮ ದಯಾಮಯನಾಗಿದ್ದಾನೆ. ಅವನು ಅವನಿಗೆ ವಿಧೇಯರಾದವರಿಗೂ ಆಗದವರಿಗೂ ಅನುಗ್ರಹವನ್ನು ದಯಪಾಲಿಸುವವನಾಗಿದ್ದಾನೆ. ಒಬ್ಬನು ಅಲ್ಲಾಹನನ್ನು ಅನುಸರಿಸಿದ ಮಾತ್ರಕ್ಕೆ ಅವನಿಗೆ ಲೌಕಿಕ ಸಮೃದ್ಧಿಗಳು ಅನುಗ್ರಹಿಸಲ್ಪಡುತ್ತದೆಂದಾಗಲೀ, ಒಬ್ಬನು ಅಲ್ಲಾಹನ ಆಜ್ಞೋಲ್ಲಂಘನೆ ಮಾಡಿದ ಕಾರಣಕ್ಕಾಗಿ ಅವನಿಗೆ ಲೌಕಿಕ ಸಮೃದ್ಧಿಗಳು ತಡೆಹಿಡಿಯಲ್ಪಡುತ್ತದೆಯೆಂದಾಗಲೀ ತಪ್ಪುಕಲ್ಪನೆಗೊಳಗಾಗಬಾರದು. ಏಕೆಂದರೆ, ಪ್ರತಿಯೊಬ್ಬರಿಗೂ ಅವರವರ ಕ್ರಮಗಳ ಪರಿಪೂರ್ಣ ಪ್ರತಿಫಲ ಲಭಿಸುವುದು ಪುನರುತ್ಥಾನ ದಿನದಲ್ಲಾಗಿದೆ. ಅಲ್ಲಿ ಗೌರವಿಸಲ್ಪಡುವವನು ವಿಜೇತನು ಮತ್ತು ಅಲ್ಲಿ ನಿಂದ್ಯನಾಗುವವನು ಪರಾಜಿತರಲ್ಲಿ ಸೇರಿದವನು.

ದೇವನ ಸಂದೇಶವಾಹಕರ ಮಾತುಗಳನ್ನು ಜನರು ಪರಿಹಾಸ್ಯ ಮಾಡಿದ್ದು ಹಾಗೂ ಸುಳ್ಳಾಗಿಸಿದ್ದು ಅವರ ಉಪದೇಶಗಳನ್ನು ತಮ್ಮ ಬುದ್ಧಿಯಿಂದ ಅಳೆದ ಕಾರಣದಿಂದಾಗಿತ್ತು. ಹೂದರು ನಮ್ಮಿಂದ ಅದ್ಹೇಗೆ ಭಿನ್ನರಾಗುತ್ತಾರೆ? ಅವರು ನಮ್ಮಂತೆ ತಿನ್ನುತ್ತಲೂ ಕುಡಿಯುತ್ತಲೂ ಇದ್ದಾರೆ. ಅವರಲ್ಲಿ ನಮಗೆ ಯಾವುದೇ ವೈಶಿಷ್ಟ್ಯತೆಗಳು ಕಂಡುಬರುವುದಿಲ್ಲ ಎಂದೆಲ್ಲ ಜನರು ಆಡಿಕೊಂಡರು.

ಲಾ ಇಲಾಹ ಇಲ್ಲಲ್ಲಾಹು ಮುಹಮ್ಮದುರ್ರಸೂಲುಲ್ಲಾಹಿ ಎಂದು ಹೇಳಿದ ಹಲವರು ಇಂದು ಪ್ರವಾದಿಗಳ ವೈಶಿಷ್ಟತೆಗಳನ್ನು ಅರಗಿಸಿಕೊಳ್ಳಲು ಸಾಧ್ಯವಾಗದೆ ಅವುಗಳಿಗೆಲ್ಲ ಹೊಸ ವ್ಯಾಖ್ಯಾನಗಳನ್ನು ನೀಡಿ ನಾವು ಆಧುನಿಕರು ಹಾಗೂ ಬುದ್ಧಿಗೆ ಗ್ರಾಹ್ಯವಾದುದನ್ನು ಮಾತ್ರ ಒಪ್ಪಿಕೊಳ್ಳುವವರಾಗಿದ್ದೇವೆಂದು ಬಿಂಬಿಸಿಕೊಳ್ಳುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಪ್ರವಾದಿಗಳ ಮೂಲಕ ಅಲ್ಲಾಹನು ಪ್ರಕಟಪಡಿಸಿದ ಅದ್ಭುತ ದೃಷ್ಟಾಂತಗಳನ್ನು ಹಾಗೆಯೇ ಅಂಗೀಕರಿಸುವವರು ಇವರ ದೃಷ್ಟಿಯಲ್ಲಿ ಕಾಲದೊಂದಿಗೆ ಹೆಜ್ಜೆ ಹಾಕದ ಪ್ರತಿಗಾಮಿಗಳು!

ಹೂದ್‌ರ ಸಮುದಾಯದಲ್ಲಿದ್ದ ಪರಲೋಕ ನಿಷೇಧಿಗಳು ಅವರೊಂದಿಗೆ ಕೇಳಿದರು:

﴿ أَيَعِدُكُمْ أَنَّكُمْ إِذَا مِتُّمْ وَكُنْتُمْ تُرَابًا وَعِظَامًا أَنَّكُمْ

مُخۡرَجُونَ ﴿٣٥﴾ ۞ هَيۡهَاتَ هَيۡهَاتَ لِمَا تُوعَدُونَ
﴿٣٦﴾ إِنۡ هِيَ إِلَّا حَيَاتُنَا ٱلدُّنۡيَا نَمُوتُ وَنَحۡيَا وَمَا
نَحۡنُ بِمَبۡعُوثِينَ ﴿٣٧﴾ إِنۡ هُوَ إِلَّا رَجُلٌ ٱفۡتَرَىٰ عَلَى
ٱللَّهِ كَذِبٗا وَمَا نَحۡنُ لَهُۥ بِمُؤۡمِنِينَ ﴿٣٨﴾

"ನೀವು ಸತ್ತು ಮಣ್ಣಾಗಿ ಹೋದ ಬಳಿಕ ಮತ್ತು ಅಸ್ಥಿಪಂಜರವಾಗಿ ಬಿಟ್ಟ ಬಳಿಕ ನೀವು (ಸಮಾಧಿಗಳಿಂದ) ಹೊರತೆಗೆಯಲ್ಪಡುವವಿರೆಂದು ಇವನು ನಿಮಗೆ ತಿಳಿಸುತ್ತಿದ್ದಾನೆಯೇ? ಅಸಾಧ್ಯ. ನಿಮಗೆ ನೀಡಲಾಗುತ್ತಿರುವ ಈ ವಾಗ್ದಾನ ತೀರಾ ಅಸಾಧ್ಯವಾದುದು. ಜೀವನವೆಂದರೆ ಈ ಲೋಕದ ಜೀವನವಲ್ಲದೆ ಮತ್ತೇನೂ ಇಲ್ಲ. ಇಲ್ಲೇ ನಾವು ಸಾಯಬೇಕಾಗಿದೆ. ಇಲ್ಲೇ ಬದುಕಬೇಕಾಗಿದೆ. ಖಂಡಿತವಾಗಿಯೂ ನಾವು ಎಬ್ಬಿಸಲ್ಪಡುವವರಲ್ಲ. ಈತ ಅಲ್ಲಾಹನ ಹೆಸರಲ್ಲಿ ಸುಳ್ಳು ಸೃಷ್ಟಿಸುತ್ತಿದ್ದಾನೆ. ನಾವೆಂದಿಗೂ ಇವನನ್ನು ನಂಬುವವರಲ್ಲ." (23:35-38)

ಮರಣಾನಂತರದ ಜೀವನವನ್ನು ನಿರಾಕರಿಸಿದ ಅವರು ನಮ್ಮಂತಿರುವ ಕೇವಲ ಒಬ್ಬ ಮನುಷ್ಯನಾದ ನಿನ್ನ ಮಾತುಗಳನ್ನು ಕೇಳಿ ವಿಶ್ವಾಸವಿಡಲು ನಾವು ಸಿದ್ಧರಿಲ್ಲವೆಂದು ಹೇಳಿದಾಗ ಹೂದ್ (عليه السلام) ರು ಆ ಜನರಿಗೆ ಅಲ್ಲಾಹನ ಶಿಕ್ಷೆಯ ಕುರಿತು ಮುನ್ನೆಚ್ಚರಿಕೆ ನೀಡಿದರು. ಆಗ ಅವರು ಹೂದರೊಂದಿಗೆ ಹೀಗೆ ಹೇಳಿದರು:

قَالُوٓاْ أَجِئۡتَنَا لِتَأۡفِكَنَا عَنۡ ءَالِهَتِنَا فَأۡتِنَا بِمَا
تَعِدُنَآ إِن كُنتَ مِنَ ٱلصَّٰدِقِينَ ﴿٢٢﴾

"ಅವರು ಹೀಗೆಂದರು: ನೀನು ನಮ್ಮನ್ನು ಮೋಸಗೊಳಿಸಿ ನಮ್ಮ ಆರಾಧ್ಯರಿಂದ ಬೇರ್ಪಡಿಸಿ ಬಿಡಲಿಕ್ಕಾಗಿ ಬಂದಿರುವೆಯಾ? ನೀನು ನಿಜಕ್ಕೂ ಸತ್ಯವಾಗಿಯಾಗಿದ್ದರೆ ನಮ್ಮನ್ನು ಬೆದರಿಸುತ್ತಿರುವಂತಹ ನಿನ್ನ ಆ ಶಿಕ್ಷೆಯನ್ನು ತಂದುಬಿಡು." (46:22)

ಅವರು ಹಿತಾಕಾಂಕ್ಷೆಯ ಉಪದೇಶವನ್ನು ಪರಿಹಾಸ್ಯ ಮಾಡಿ ಸುಳ್ಳಾಗಿಸಿದ್ದು ಮಾತ್ರವಲ್ಲದೆ, ನೀನು ವಾಗ್ದಾನ ಮಾಡುವ ಆ ಶಿಕ್ಷೆಯನ್ನು ತಂದುಬಿಡು ಎಂಬ ಪಂಥಾಹ್ವಾನವನ್ನೂ ಒಡ್ಡಿದರು. ಅಂತಿಮವಾಗಿ ಹೂದರು ಅಲ್ಲಾಹನೊಂದಿಗೆ ಹೀಗೆ ಪ್ರಾರ್ಥಿಸಿದರು:

قَالَ رَبِّ ٱنصُرۡنِي بِمَا كَذَّبُونِ ﴿٣٩﴾

"ನನ್ನ ಪ್ರಭೂ, ಇವರು ನನ್ನನ್ನು ಸುಳ್ಳಾಗಿಸಿರುವುದರಿಂದ ಈಗ ನೀನೇ ನನಗೆ ಸಹಾಯ ಮಾಡು." (23:39)

ಅಲ್ಲಾಹನು ಹೂದ್(عليه السلام) ರೊಂದಿಗೆ ಹೀಗೆ ಹೇಳಿದ:

قَالَ عَمَّا قَلِيلٖ لَّيُصۡبِحُنَّ نَٰدِمِينَ ﴿٤٠﴾

"ಇವರು ತಮ್ಮ ಕ್ರಮಗಳಿಗಾಗಿ ಪಶ್ಚಾತ್ತಾಪಪಡುವ ಸಮಯ ಸಮೀಪಿಸಿದೆ. (23:40)"

ಆ ಶಿಕ್ಷೆ ಅವರಿಗೆ ಹೀಗೆ ಬಂದೆರಗಿತು. ಅವರು ದೀರ್ಘಕಾಲ ಮಳೆಯಿಲ್ಲದೆ ಬಳಲಿ ಬೆಂಡಾದರು. ಮೂರು ವರ್ಷಗಳ ಕಾಲ ಅವರು ಅನಾವೃಷ್ಟಿಯಿಂದ ತತ್ತರಿಸಿದರೆಂದು ಹೇಳಲಾಗುತ್ತದೆ. ಅನಂತರ ಅವರು ತಮ್ಮ ಕಣಿವೆಯ ದಿಗಂತದ ಕಾರ್ಮೋಡ ಆವೃತವಾಗಿರುವುದನ್ನು ನೋಡಿದರು. ಹಾಗೆ ಅವರು ಅದನ್ನು (ಶಿಕ್ಷೆಯನ್ನು) ತಮ್ಮ ಕಣಿವೆಗೆ ಸುರಿಸಲ್ಪಡುವ ಮಳೆಯ ಮೋಡವೆಂದೇ ಭಾವಿಸಿ ಸಂತೋಷಪಟ್ಟರು.

ಮಳೆ ಬರದೆ ಬರಗಾಲದಿಂದ ಕಷ್ಟ–ನಷ್ಟಗಳನ್ನು ಅನುಭವಿಸಿದ ಅವರು ಪ್ರಸ್ತುತ ಆವೃತಗೊಂಡಿದ್ದ ಕಾರ್ಮೋಡದಿಂದ ಪುಳಕಿತರಾಗಿ ಮಳೆಯನ್ನು ಎದುರು ನೋಡುತ್ತಿದ್ದರು. ಆದರೆ ಅದು ಅವರನ್ನು ಸಂತೋಷಪಡಿಸುವ ವರ್ಷಧಾರೆಯಾಗಿರಲಿಲ್ಲ. ಬದಲಾಗಿ, ಅದು ಅಲ್ಲಾಹನ ಸಂದೇಶವಾಹಕರಾದ ಹೂದ್(عليه السلام) ರನ್ನು ಪರಿಹಾಸ್ಯ ಮಾಡಿ, ಸುಳ್ಳಾಗಿಸಿ ಬೇಗ ತಂದುಬಿಡು ಎಂಬ ಸವಾಲೊಡ್ಡಿದ್ದರೋ ಆ ಕಠೋರ ಶಿಕ್ಷೆಯ ಮುನ್ಸೂಚಣೆಯಾಗಿತ್ತು. ಪವಿತ್ರ ಕುರ್‌ಆನ್ ಅದನ್ನು ಪರಿಣಾಮಕಾರಿ ಶೈಲಿಯಲ್ಲಿ ವಿವರಿಸುವುದನ್ನು ನೋಡಿರಿ:

فَلَمَّا رَأَوۡهُ عَارِضٗا مُّسۡتَقۡبِلَ أَوۡدِيَتِهِمۡ قَالُواْ هَٰذَا
عَارِضٞ مُّمۡطِرُنَاۚ بَلۡ هُوَ مَا ٱسۡتَعۡجَلۡتُم بِهِۦۖ رِيحٞ فِيهَا عَذَابٌ
أَلِيمٞ ﴿٢٤﴾ تُدَمِّرُ كُلَّ شَيۡءِۭ بِأَمۡرِ رَبِّهَا فَأَصۡبَحُواْ لَا يُرَىٰٓ
إِلَّا مَسَٰكِنُهُمۡۚ كَذَٰلِكَ نَجۡزِي ٱلۡقَوۡمَ ٱلۡمُجۡرِمِينَ ﴿٢٥﴾

"ತರುವಾಯ ಅವರು ಆ ಯಾತನೆಯು ತಮ್ಮ ಕಣಿವೆಗಳತ್ತ ಬರುತ್ತಿರುವುದನ್ನು ಕಂಡು, ಇದು ನಮ್ಮ ಮೇಲೆ ಮಳೆ ಸುರಿಸಲಿಕ್ಕಾಗಿ ಬರುತ್ತಿರುವ ಮೋಡ ಎಂದರು. ಅಲ್ಲ! ವಾಸ್ತವದಲ್ಲಿ ಇದು ನೀವು ಆತುರಪಡುತ್ತಿರುವ ವಸ್ತುವೇ ಆಗಿದೆ. ಇದು

ಬಿರುಗಾಳಿಯಾಗಿದ್ದು ಇದರಲ್ಲಿ ವೇದನಾಜನಕ ಶಿಕ್ಷೆ ಇದೆ. ಇದು ತನ್ನ ಪ್ರಭುವಿನ ಅಪ್ಪಣೆಯಂತೆ ಸಕಲ ವಸ್ತುಗಳನ್ನೂ ನಾಶಗೊಳಿಸಿಬಿಡುವುದು. ಕೊನೆಗೆ ಅವರ ಪಾಡೇನಾಯಿತೆಂದರೆ, ಅವರ ವಾಸಸ್ಥಳಗಳ ಹೊರತು ಅಲ್ಲಿ ಬೇರೇನೂ ಕಂಡುಬರುತ್ತಿರಲಿಲ್ಲ. ಈ ರೀತಿಯಲ್ಲಿ ನಾವು ಅಪರಾಧಿಗಳಿಗೆ ಪ್ರತಿಫಲ ಕೊಡುತ್ತೇವೆ.“ (46:24-25)

ಭೀಕರ ಚಂಡಮಾರುತದಿಂದ ಅವರು ನಾಶವಾದರು. ಶಕ್ತಿ ಸಾಮರ್ಥ್ಯಗಳಲ್ಲಿ ಪ್ರಬಲರಾಗಿದ್ದ ಆ ಜನತೆಯನ್ನು ಅಲ್ಲಾಹನು ನಾಮಾವಶೇಷಗೊಳಿಸಿದನು. ಆ ಬಿರುಗಾಳಿಯ ಭೀಕರತೆಯ ಕುರಿತು ಅಲ್ಲಾಹನು ಪವಿತ್ರ ಕುರ್‌ಆನಿನಲ್ಲಿ ವಿವರಿಸಿದ್ದಾನೆ.

ಅವರ ಮೇಲೆ ಏಳು ದಿನಗಳ ಕಾಲ ರಾತ್ರಿ–ಹಗಲೆನ್ನದೆ ಬಿರುಗಾಳಿ ಮತ್ತು ಕುಂಭದ್ರೋಣ ಮಳೆ ವರ್ಷಿಸಿ ಅವರು ವಾಸವಾಗಿದ್ದ ಸ್ಥಳಗಳನ್ನು ಹೊರತುಪಡಿಸಿ ಬೇರೆ ಯಾವುದೇ ಕುರುಹನ್ನೂ ಉಳಿಸದೆ ವಸ್ತುಶಃ ಅವರೆಲ್ಲರೂ ಅಳಿದುಹೋದರು.

﴿ فَأَرْسَلْنَا عَلَيْهِمْ رِيحًا صَرْصَرًا فِىٓ أَيَّامٍ نَّحِسَاتٍ لِّنُذِيقَهُمْ عَذَابَ ٱلْخِزْىِ فِى ٱلْحَيَوٰةِ ٱلدُّنْيَا ۖ وَلَعَذَابُ ٱلْءَاخِرَةِ أَخْزَىٰ ۖ وَهُمْ لَا يُنصَرُونَ ﴿١٦﴾ ﴾

“ಅಂತಿಮವಾಗಿ ನಾವು ಅವರಿಗೆ ಲೌಕಿಕ ಜೀವನದಲ್ಲಿಯೇ ಅಪಮಾನಕರ ಯಾತನೆಯ ಸವಿಯನ್ನು ಉಣಿಸಲಿಕ್ಕಾಗಿ ಅವರ ಮೇಲೆ ತೀವ್ರವಾದ ಚಂಡಮಾರುತವನ್ನು ಕಳುಹಿಸಿಕೊಟ್ಟೆವು. ಪರಲೋಕದ ಶಿಕ್ಷೆಯಂತೂ ಇದಕ್ಕಿಂತಲೂ ಹೆಚ್ಚು ಅಪಮಾನಕರವಾಗಿದೆ. ಅಲ್ಲಿ ಅವರಿಗೆ ಸಹಾಯ ಮಾಡುವವರು ಯಾರೂ ಇರಲಾರರು” (41:16)

ಅಲ್ಲಾಹನು ನಮ್ಮೆಲ್ಲರನ್ನು ಅವನ ಶಿಕ್ಷೆಯಿಂದ ರಕ್ಷಿಸಲಿ —ಆಮೀನ್.

---

*14 ನೇ ಪುಟದಿಂದ*

## ಪ್ಯಾಲಸ್ತೀನ್ —ಮರಳಿ ಪಡೆಯುವುದು ಹೇಗೆ?

ತೋರಿಸಿಕೊಡುತ್ತದೆ. ಅವು ಕರೆಯುವುದು “ಓ ಅಲ್ಲಾಹನ ದಾಸನೇ!”, “ಓ ಮುಸಲ್ಮಾನನೇ!” ಎಂದು ಇಸ್ಲಾಮೀ ರೀತಿಯಲ್ಲಿಯೇ ಹೊರತು ಅರಬಿಗಳ ಹೆಸರಲ್ಲಲ್ಲ. ಪ್ರವಾದಿಯವರು(ﷺ) ಹೇಳಿದ್ದು “ಮುಸಲ್ಮಾನರು ಯಹೂದಿಗಳೊಂದಿಗೆ ಯುದ್ಧ ಮಾಡುವರು” ಎಂದಾಗಿದೆಯೇ ಹೊರತು ಅರಬಿಗಳು ಯಹೂದಿಗಳೊಡನೆ ಯುದ್ಧ ಮಾಡುವರು ಎಂದಲ್ಲ.

ಈ ಕಾರಣದಿಂದಲೇ ನಾವು ಹೇಳುತ್ತೇವೆ: ‘ಅರಬ್ ರಾಷ್ಟ್ರೀಯತೆ’ಯ ಹೆಸರಲ್ಲಿ ಯಹೂದಿಗಳ ವಿರುದ್ಧ ಗೆಲ್ಲಲು ನಮಗೆ ಸಾಧ್ಯವಲಿಲ್ಲ. ನಾವು ಗೆಲ್ಲಬೇಕಾದರೆ ಅದು ಇಸ್ಲಾಮಿನ ಹೆಸರಲ್ಲೇ ಆಗಿರಬೇಕು. ಅಲ್ಲಾಹು ಹೇಳುವುದನ್ನು ನೋಡಿ:

﴿ وَلَقَدْ كَتَبْنَا فِى ٱلزَّبُورِ مِنۢ بَعْدِ ٱلذِّكْرِ أَنَّ ٱلْأَرْضَ يَرِثُهَا عِبَادِىَ ٱلصَّٰلِحُونَ ﴿١٠٥﴾ ﴾

“ನನ್ನ ಸಜ್ಜನ ದಾಸರು ಈ ಭೂಮಿಯನ್ನು ಉತ್ತರಾಧಿಕಾರವಾಗಿ ಪಡೆಯುವರು ಎಂದು ನಾವು ಝುಬೂರ್‌ನಲ್ಲಿ ಉಪದೇಶದ ಬಳಿಕ ದಾಖಲಿಸಿದ್ದೇವೆ.” (21:105)

ಉತ್ತರಾಧಿಕಾರವಿರುವುದು ಸಜ್ಜನ ದಾಸರಿಗೆ ಮಾತ್ರ. ಸಜ್ಜನ ದಾಸರು ಎಲ್ಲಿಯ ತನಕ ಅಸ್ತಿತ್ವದಲ್ಲಿರುತ್ತಾರೋ ಅಲ್ಲಿಯ ತನಕ ಈ ವಾಗ್ದಾನ ಅಸ್ತಿತ್ವದಲ್ಲಿರುತ್ತದೆ. ಸಜ್ಜನ ದಾಸರು ಇಲ್ಲದಾಗುವಾಗ ಈ ವಾಗ್ದಾನವೂ ಇಲ್ಲವಾಗುತ್ತದೆ. ನಾವು ಸಜ್ಜನರಾದರೆ ಎಂದೂ ಮುಗಿಯದ ಕಷ್ಟಗಳು, ತೊಂದರೆಗಳು, ಹಿಂಸೆಗಳು, ಉದ್ದುದ್ದ ಭಾಷಣಗಳು ಮುಂತಾದ ಯಾವುದೂ ಇಲ್ಲದೆ ಸುಲಭವಾಗಿ ನಮಗೆ ಅದನ್ನು ಉತ್ತರಾಧಿಕಾರವಾಗಿ ಪಡೆಯಬಹುದಾಗಿದೆ.

ಇಸ್ಲಾಮಿನ ಸುವರ್ಣಕಾಲದಲ್ಲಿ ಮುಸಲ್ಮಾನರು ಪ್ಯಾಲಸ್ತೀನನ್ನು ವಶದಲ್ಲಿಟ್ಟುಕೊಂಡದ್ದು ಇಸ್ಲಾಮಿನ ಹೆಸರಲ್ಲೇ ಆಗಿತ್ತೆಂದು ನಮಗೆ ತಿಳಿದಿದೆ. ಮುಸಲ್ಮಾನರು ಪರ್ಶಿಯನ್ನರ, ರೋಮನ್ನರ, ಕಿಬ್ತಿಗಳ ರಾಜಧಾನಿಗಳನ್ನು ನಡುಗಿಸಿದ್ದು ಇಸ್ಲಾಮಿನ ಹೆಸರಲ್ಲೇ ಆಗಿತ್ತೆಂದೂ ನಮಗೆ ತಿಳಿದಿದೆ.

ನಮ್ಮ ಯುವಕರು ಈ ಬಗ್ಗೆ ಸರಿಯಾಗಿ ಚಿಂತಿಸಬೇಕು. ಇಸ್ಲಾಮನ್ನು ವಸ್ತುನಿಷ್ಠವಾಗಿ ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳದೆ ಜಯ ಗಳಿಸಲು ನಮಗೆ ಖಂಡಿತ ಸಾಧ್ಯವಿಲ್ಲ. ಇಸ್ಲಾಮ್ ನಮ್ಮ ಜೀವನದಲ್ಲಿರಬೇಕೇ ಹೊರತು ನಮ್ಮ ಐಡೆಂಟಿಟಿ ಕಾರ್ಡ್‌ಗಳಲ್ಲಲ್ಲ! (ತಫ್ಸೀರ್ ಸೂರ ಅಲ್‌ಬಕರ 1/169-170) ■

# شرح القواعد الأربع

# ಶರ್ಹುಲ್ ಕವಾಇದಿಲ್ ಅರ್‌ಬಅ್

## (ನಾಲ್ಕು ಮೂಲಭೂತ ತತ್ವಗಳ ವಿವರಣೆ)

✍ ಶೈಖ್ ಸಾಲಿಹ್ ಇಬ್ನ್ ಫೌಝಾನ್ ಅಲ್‌ಫೌಝಾನ್

ಶೈಖ್‌ರವರು(ﷺ) ಹೇಳುತ್ತಾರೆ:

وَدَلِيلُ الشَّمْسِ وَالْقَمَرِ قَوْلُهُ تَعَالَى: ﴿وَمِنْ ءَايَـٰتِهِ ٱلَّيْلُ وَٱلنَّهَارُ وَٱلشَّمْسُ وَٱلْقَمَرُ لَا تَسْجُدُواْ لِلشَّمْسِ وَلَا لِلْقَمَرِ وَٱسْجُدُواْ لِلَّهِ ٱلَّذِى خَلَقَهُنَّ إِن كُنتُمْ إِيَّاهُ تَعْبُدُونَ ﴿٣٧﴾﴾

"ಸೂರ್ಯ–ಚಂದ್ರರು ಆರಾಧ್ಯರಲ್ಲ ಎನ್ನುವುದಕ್ಕೆ ಪುರಾವೆ ಅಲ್ಲಾಹನ(ﷻ) ಈ ವಚನ: "ರಾತ್ರಿ, ಹಗಲು, ಸೂರ್ಯ ಮತ್ತು ಚಂದ್ರ ಅಲ್ಲಾಹನ ದೃಷ್ಟಾಂತಗಳಲ್ಲಿ ಸೇರಿದವುಗಳು. ಸೂರ್ಯ–ಚಂದ್ರರಿಗೆ ಸಾಷ್ಟಾಂಗವೆರಗಬಾರದು. ಅವುಗಳನ್ನು ಸೃಷ್ಟಿಸಿದ ಅಲ್ಲಾಹನಿಗೆ ಸಾಷ್ಟಾಂಗವೆರಗಿರಿ. ನೀವು ಅವನನ್ನು ಆರಾಧಿಸುವವರಾಗಿದ್ದರೆ." (ಫುಸ್ಸಿಲತ್ 37)"

### ವ್ಯಾಖ್ಯಾನ

ಸೂರ್ಯ–ಚಂದ್ರರನ್ನು ಆರಾಧಿಸುವ ಜನರೂ ಇದ್ದಾರೆನ್ನುವುದಕ್ಕೆ ಈ ಆಯತ್ ಪುರಾವೆಯಾಗಿದೆ. ಈ ಕಾರಣದಿಂದಲೇ ಸೂರ್ಯೋದಯ ಮತ್ತು ಸೂರ್ಯಾಸ್ತದ ಸಮಯದಲ್ಲಿ ನಮಾಝ್ ಮಾಡುವುದನ್ನು ಪ್ರವಾದಿಯವರು(ﷺ) ವಿರೋಧಿಸಿದರು. ಕಾರಣ, ಸೂರ್ಯೋದಯವಾಗುವಾಗ ಮತ್ತು ಸೂರ್ಯಾಸ್ತವಾಗುವಾಗ ಸೂರ್ಯನಿಗೆ ಸಾಷ್ಟಾಂಗ ಮಾಡುವ ಜನರಿದ್ದಾರೆ. ಆದುದರಿಂದ ಈ ಎರಡು ಸಮಯಗಳಲ್ಲಿ ನಮಾಝ್ ಮಾಡುವುದನ್ನು ನಮಗೆ ವಿರೋಧಿಸಲಾಗಿದೆ. ನಾವು ನಮಾಝ್ ಮಾಡುವುದು ಅಲ್ಲಾಹನಿಗಾಗಿದ್ದರೂ ಸಹ. ಏಕೆಂದರೆ ಈ ಸಮಯದಲ್ಲಿ ನಮಾಝ್ ಮಾಡಿದರೆ ಅದು ಮುಶ್ರಿಕರು ಮಾಡುವ ಸಾಷ್ಟಾಂಗಕ್ಕೆ ಹೋಲಿಕೆಯಾಗುವ ಸಾಧ್ಯತೆಯಿದೆ. ಆದುದರಿಂದ ಇದು ಶಿರ್ಕ್ ಉಂಟಾಗಲು ಕಾರಣವಾಗದಿರಲಿ ಎಂದು ಪ್ರವಾದಿಯವರು(ﷺ) ಈ ಸಮಯದಲ್ಲಿ ನಮಾಝ್ ಮಾಡುವುದನ್ನು ವಿರೋಧಿಸಿದರು. ಪ್ರವಾದಿಯವರು(ﷺ) ಶಿರ್ಕನ್ನು ವಿರೋಧಿಸುವುದರೊಂದಿಗೆ ಅದರೆಡೆಗೆ ಕೊಂಡೊಯ್ಯುವ ಮಾರ್ಗಗಳೆಲ್ಲವನ್ನೂ ಮುಚ್ಚಿದ್ದರು.

ಶೈಖ್‌ರವರು(ﷺ) ಹೇಳುತ್ತಾರೆ:

وَدَلِيلُ الْمَلَائِكَةِ قَوْلُهُ تَعَالَى: ﴿وَلَا يَأْمُرَكُمْ أَن تَتَّخِذُواْ ٱلْمَلَـٰٓئِكَةَ وَٱلنَّبِيِّـۧنَ أَرْبَابًا﴾

"ಮಲಕ್‌ಗಳು ಆರಾಧ್ಯರಲ್ಲ ಎನ್ನುವುದಕ್ಕೆ ಪುರಾವೆ ಅಲ್ಲಾಹನ(ﷻ) ಈ ವಚನ: "ಮಲಕ್‌ಗಳನ್ನು ಮತ್ತು ಪ್ರವಾದಿಗಳನ್ನು ಆರಾಧಿಸಿರಿ ಎಂದು ಅವರು ನಿಮ್ಮೊಡನೆ ಎಂದಿಗೂ ಆದೇಶಿಸಲಾರರು." (ಆಲು ಇಮ್ರಾನ್ 80)"

### ವ್ಯಾಖ್ಯಾನ

ಮಲಕ್‌ಗಳನ್ನು ಮತ್ತು ಮಹಾಪುರುಷರನ್ನು ಆರಾಧಿಸುವವರೂ

ಇದ್ದಾರೆ ಮತ್ತು ಅವರನ್ನು ಆರಾಧಿಸುವುದು ಶಿರ್ಕ್ ಆಗಿದೆಯೆನ್ನು-ವುದಕ್ಕೆ ಈ ಆಯತ್ ಪುರಾವೆಯಾಗಿದೆ. ಆದರೆ ಮಲಕ್‌ಗಳನ್ನು, ಪ್ರವಾದಿಗಳನ್ನು ಮತ್ತು ಮಹಾಪುರುಷರನ್ನು ಆರಾಧಿಸುವುದು ಶಿರ್ಕ್ ಅಲ್ಲ ಎಂದು ನಮ್ಮ ಈ ಕಾಲದ ಗೋರಿಯಾರಾಧಕರು ಹೇಳುತ್ತಾರೆ.

ಶೈಖ್‌ರವರು(ﷺ) ಹೇಳುತ್ತಾರೆ:

وَدَلِيلُ الْأَنْبِيَاءِ قَوْلُهُ تَعَالَى: ﴿وَإِذْ قَالَ ٱللَّهُ يَـٰعِيسَى ٱبْنَ مَرْيَمَ ءَأَنتَ قُلْتَ لِلنَّاسِ ٱتَّخِذُونِى وَأُمِّىَ إِلَـٰهَيْنِ مِن دُونِ ٱللَّهِ ۖ قَالَ سُبْحَـٰنَكَ مَا يَكُونُ لِىٓ أَنْ أَقُولَ مَا لَيْسَ لِى بِحَقٍّ ۚ إِن كُنتُ قُلْتُهُۥ فَقَدْ عَلِمْتَهُۥ ۚ تَعْلَمُ مَا فِى نَفْسِى وَلَآ أَعْلَمُ مَا فِى نَفْسِكَ ۚ إِنَّكَ أَنتَ عَلَّـٰمُ ٱلْغُيُوبِ ﴿١١٦﴾﴾ [المائـدة آية ١١٦]

"ಪ್ರವಾದಿಗಳು ಆರಾಧ್ಯರಲ್ಲ ಎನ್ನುವುದಕ್ಕೆ ಪುರಾವೆ ಅಲ್ಲಾಹನ (ﷻ) ಈ ವಚನ: "ಓ ಮರ್ಯಮರ ಮಗ ಈಸಾರವರೇ! ಅಲ್ಲಾ-ಹನನ್ನು ಬಿಟ್ಟು ನನ್ನನ್ನು ಮತ್ತು ನನ್ನ ತಾಯಿಯನ್ನು ಆರಾಧಿಸಿರಿ ಎಂದು ನೀವು ಜನರೊಡನೆ ಆದೇಶಿಸಿದ್ದೀರಾ? ಎಂದು ಅಲ್ಲಾಹು ಕೇಳುವ ಸಂದರ್ಭ. ಆಗ ಅವರು ಹೇಳುವರು: ನೀನು ಯಾವುದೇ ನ್ಯೂನತೆಗಳಿಲ್ಲದ ಪರಿಶುದ್ಧನು! ನನಗೆ ಹೇಳಲು ಯಾವುದೇ ಹಕ್ಕಿಲ್ಲದ ಮಾತನ್ನು ಹೇಳಲು ನನ್ನಿಂದ ಸಾಧ್ಯವೇ? ನಾನದನ್ನು ಹೇಳಿದ್ದರೆ ನಿನಗೆ ಅದು ತಿಳಿದಿರುತ್ತಿತ್ತು. ನನ್ನ ಮನಸ್ಸಿನಲ್ಲಿರುವು-ದನ್ನು ನೀನು ಅರಿಯುವೆ. ಆದರೆ ನಿನ್ನ ಮನಸ್ಸಿನಲ್ಲಿರುವುದನ್ನು ನಾನು ಅರಿಯಲಾರೆ. ನೀನು ಅಗೋಚರವಾಗಿರುವ ಎಲ್ಲವನ್ನೂ ಅರಿತವನಾಗಿರುವೆ." (ಅಲ್‌ಮಾಇದ 116)"

## ವ್ಯಾಖ್ಯಾನ

ವಿಗ್ರಹಾರಾಧನೆಯಂತೆ ಪ್ರವಾದಿಗಳನ್ನು ಆರಾಧಿಸುವುದು ಕೂಡ ಶಿರ್ಕ್ ಎನ್ನುವುದಕ್ಕೆ ಈ ಆಯತ್ ಪುರಾವೆಯಾಗಿದೆ. ಈ ಎರಡು ಆರಾಧನೆಗಳು ಬೇರೆ ಬೇರೆಯೆಂದು ಹೇಳುವ ಗೋರಿಯಾರಾ-ಧಕರಿಗೆ ಇದರಲ್ಲಿ ಉತ್ತರವಿದೆ. ವಿಗ್ರಹಾರಾಧನೆ ಮಾಡುವುದು ಮಾತ್ರ ಶಿರ್ಕ್ ಎಂದು ಹೇಳುವವರಿಗೆ ಇದರಲ್ಲಿ ಉತ್ತರವಿದೆ. ಅವರ ಪ್ರಕಾರ ವಿಗ್ರಹಗಳನ್ನು ಆರಾಧಿಸುವವರು ಮತ್ತು ಮಹಾಪುರುಷ-ರನ್ನು ಆರಾಧಿಸುವವರು ಸಮಾನರಲ್ಲ. ಇವೆರಡು ಆರಾಧನೆಗಳು ಒಂದೇ ಎಂದು ಹೇಳುವುದನ್ನು ಅವರು ನಿರಾಕರಿಸುತ್ತಾರೆ. ಶಿರ್ಕ್ ಎಂದರೆ ವಿಗ್ರಹಾರಾಧನೆ ಮಾತ್ರವೆಂದು ಅವರು ವಾದಿಸುತ್ತಾರೆ. ಎರಡು ಕಾರಣಗಳಿಂದ ಇವರ ಈ ವಾದ ನಿರರ್ಥಕವಾಗಿದೆ.

ಒಂದು: ಅಲ್ಲಾಹು(ﷻ) ಕುರ್‌ಆನ್‌ನಲ್ಲಿ ಅಲ್ಲಾಹು ಅಲ್ಲದವರಿಗೆ ಸಲ್ಲುವ ಎಲ್ಲ ಆರಾಧನೆಗಳನ್ನೂ ವಿರೋಧಿಸಿದ್ದಾನೆ. ಅವರೆಲ್ಲರೊಂ-ದಿಗೂ ಹೋರಾಡಲು ಆದೇಶಿಸಿದ್ದಾನೆ.

ಎರಡು: ಪ್ರವಾದಿಯವರು(ﷺ) ವಿಗ್ರಹಗಳನ್ನು ಆರಾಧಿಸುವವರ ಮತ್ತು ಮಲಕ್‌ಗಳನ್ನು ಅಥವಾ ಮಹಾಪುರುಷರನ್ನು ಆರಾಧಿಸು-ವವರ ಮಧ್ಯೆ ಬೇಧ ಮಾಡಿಲ್ಲ.

ಶೈಖ್‌ರವರು(ﷺ) ಹೇಳುತ್ತಾರೆ:

وَدَلِيلُ الصَّالِحِيـــنَ قَوْلُـــهُ تَعَالَى: ﴿أُولَـٰٓئِكَ ٱلَّذِينَ يَدْعُونَ يَبْتَغُونَ إِلَىٰ رَبِّهِمُ ٱلْوَسِيلَةَ أَيُّهُمْ أَقْرَبُ وَيَرْجُونَ رَحْمَتَهُۥ وَيَخَافُونَ عَذَابَهُۥٓ ۚ﴾ [الإســراء آية ٥٧]

"ಮಹಾಪುರುಷರು ಆರಾಧ್ಯರಲ್ಲ ಎನ್ನುವುದಕ್ಕೆ ಪುರಾವೆ ಅಲ್ಲಾಹನ (ﷻ) ಈ ವಚನ: "ಅವರು ಯಾರನ್ನು ಕರೆದು ಪ್ರಾರ್ಥಿಸುತ್ತಿರುವರೋ ಅವರು ಅಲ್ಲಾಹನಿಗೆ ಸಮೀಪವಾಗುವ ದಾರಿಗಳನ್ನು ಹುಡುಕು-ತ್ತಿದ್ದಾರೆ. ಅವರು ಅಲ್ಲಾಹನ ದಯೆಯನ್ನು ಆಶಿಸುತ್ತಲೂ, ಅವನ ಶಿಕ್ಷೆಯನ್ನು ಭಯಪಡುತ್ತಲೂ ಇದ್ದಾರೆ." (ಅಲ್‌ಇಸ್ರಾಅ್ 57)"

## ವ್ಯಾಖ್ಯಾನ

ಮಹಾಪುರುಷರನ್ನು ಆರಾಧಿಸುವವರೂ ಜನರಲ್ಲಿದ್ದಾರೆನ್ನುವುದಕ್ಕೆ ಈ ಆಯತ್ ಪುರಾವೆಯಾಗಿದೆ. ಅಲ್ಲಾಹು(ﷻ) ಹೇಳುತ್ತಾನೆ:

﴿أُولَـٰٓئِكَ ٱلَّذِينَ يَدْعُونَ يَبْتَغُونَ إِلَىٰ رَبِّهِمُ ٱلْوَسِيلَةَ أَيُّهُمْ أَقْرَبُ﴾

"ಅವರು ಯಾರನ್ನು ಕರೆದು ಪ್ರಾರ್ಥಿಸುತ್ತಿರುವರೋ ಅವರು ಅಲ್ಲಾಹನಿಗೆ ಸಮೀಪವಾಗುವ ದಾರಿಗಳನ್ನು ಹುಡುಕುತ್ತಿದ್ದಾರೆ." (ಅಲ್‌ಇಸ್ರಾಅ್ 57)

ಇದು ಈಸಾರನ್ನು(ﷺ), ಅವರ ತಾಯಿಯನ್ನು ಮತ್ತು ಉಝೈರ್‌ರನ್ನು(ﷺ) ಆರಾಧಿಸುವವರ ವಿಷಯದಲ್ಲಿ ಅವತೀರ್ಣವಾದ ಆಯತ್ ಆಗಿದೆಯೆಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ. ಈಸಾ(ﷺ), ಅವರ ತಾಯಿ ಮರ್ಯಮ್(ﷺ) ಮತ್ತು ಉಝೈರ್(ﷺ) ಅಲ್ಲಾಹನ ದಾಸರೆಂದು ಅಲ್ಲಾಹು ಇಲ್ಲಿ ಹೇಳುತ್ತಿದ್ದಾನೆ. ಅವರು ಅಲ್ಲಾಹನಿಗೆ ಸಮೀಪವಾಗಲಿರುವ ದಾರಿಗಳನ್ನು ಹುಡುಕುತ್ತಿದ್ದಾರೆ, ಅವನ ದಯೆಯನ್ನು ಆಶಿಸುತ್ತಿದ್ದಾರೆ ಮತ್ತು ಅವನ ಶಿಕ್ಷೆಯನ್ನು ಭಯಪಡುತ್ತಿದ್ದಾರೆ. ಅವರು ಸಂಪೂರ್ಣವಾಗಿ ಅಲ್ಲಾಹನಲ್ಲಿ ಅವಲಂಬಿತರಾಗಿದ್ದಾರೆ. ಅಲ್ಲಾಹನಲ್ಲಿ ಆಶ್ರಯ ಕೋರುತ್ತಿದ್ದಾರೆ. ಅಲ್ಲಾಹನನ್ನು ತೃಪ್ತಿಪಡಿಸುವುದಕ್ಕಿರುವ ಸತ್ಕರ್ಮಗಳನ್ನು ನಿರ್ವಹಿಸುತ್ತಿದ್ದಾರೆ. ಅಲ್ಲಾಹನಿಗೆ ಸಮೀಪವಾಗಲು ಇರುವ ದಾರಿಗಳನ್ನು ಹುಡುಕುತ್ತಿದ್ದಾರೆ. ಆದುದರಿಂದ ಅವರಲ್ಲಿ ಯಾರೂ ಆರಾಧಿಸಲ್ಪಡಲು ಅರ್ಹರಲ್ಲ. ಕಾರಣ, ಅವರೆಲ್ಲರೂ ಮನುಷ್ಯರು. ಕ್ಷಣಕ್ಷಣಕ್ಕೂ ಅಲ್ಲಾಹನ ಅಗತ್ಯವುಳ್ಳವರು. ಅಲ್ಲಾಹನಲ್ಲಿ ಪ್ರಾರ್ಥಿಸುವವರು, ಅಲ್ಲಾಹನ ದಯೆಯನ್ನು ಆಶಿಸುವವರು ಮತ್ತು ಅವನ ಶಿಕ್ಷೆಯನ್ನು ಭಯಪಡುವವರು. ಯಾರ ಸ್ಥಿತಿ ಹೀಗಿರುತ್ತದೋ ಅವರು ಆರಾಧಿಸಲ್ಪಡಲು ಅರ್ಹರಲ್ಲ.

ಇನ್ನೊಂದು ಅಭಿಪ್ರಾಯದ ಪ್ರಕಾರ ಈ ಆಯತ್ ಅವತೀರ್ಣವಾದದ್ದು ಜಿನ್ನ್‌ಗಳನ್ನು ಆರಾಧಿಸುತ್ತಿದ್ದ ಕೆಲವು ಜನರ ಬಗ್ಗೆ. ಅವರು ಆರಾಧಿಸುತ್ತಿದ್ದ ಆ ಜಿನ್ನ್‌ಗಳು ಮುಸ್ಲಿಮರಾದರು. ಆದರೆ ಇವರಿಗೆ ಅದು ಗೊತ್ತಿರಲಿಲ್ಲ. ಆ ಜಿನ್ನ್‌ಗಳು ಸತ್ಕರ್ಮಗಳ ಮೂಲಕ, ಆರಾಧನೆಗಳ ಮೂಲಕ ಅಲ್ಲಾಹನಿಗೆ ಸಮೀಪವಾಗಲು ತೊಡಗಿದರು. ಅಲ್ಲಾಹನ ದಯೆಯನ್ನು ಆಶಿಸುತ್ತಲೂ ಅವನ ಶಿಕ್ಷೆಯನ್ನೂ ಭಯಪಡುತ್ತಲೂ ಇದ್ದರು. ಅವರು ಕೂಡ ಅಲ್ಲಾಹನ ದಾಸರು. ಅಲ್ಲಾಹನನ್ನು ಸಂಪೂರ್ಣವಾಗಿ ಅವಲಂಬಿಸಿದವರು. ಅವರು ಕೂಡ ಆರಾಧಿಸಲ್ಪಡಲು ಅರ್ಹರಲ್ಲ.

ಈ ಆದರಣೀಯ ಆಯತ್ತಿನ ಉದ್ದೇಶ ಏನೇ ಆಗಿದ್ದರೂ ಮಹಾಪುರುಷರನ್ನು ಆರಾಧಿಸುವುದನ್ನು ಇದು ವಿರೋಧಿಸುತ್ತದೆ ಎನ್ನುವುದರಲ್ಲಿ ಸಂಶಯವಿಲ್ಲ. ಆ ಮಹಾಪುರುಷರು ಪ್ರವಾದಿಗಳೋ, ಸತ್ಯವಂತರೋ, ಸಜ್ಜನರೋ ಅಥವಾ ಇತರ ಯಾರೇ ಆಗಿದ್ದರೂ ಸಹ. ಅವರಾರನ್ನೂ ಆರಾಧಿಸಬಾರದು. ಅವರಲ್ಲಿ ಯಾರೂ ಆರಾಧಿಸಲ್ಪಡರು ಅರ್ಹರಲ್ಲ. ಕಾರಣ ಅವರೆಲ್ಲರೂ ಅಲ್ಲಾಹನ ದಾಸರು. ಅವರೆಲ್ಲರೂ ಅಲ್ಲಾಹನನ್ನು ಅವಲಂಬಿಸಿಕೊಂಡಿರುವವರು.

ಇಲ್ಲಿ 'ವಸೀಲ' ಎನ್ನುವುದರ ಉದ್ದೇಶ: ಸತ್ಕರ್ಮಗಳು ಮತ್ತು ಅಲ್ಲಾಹನಿಗೆ ಸಮೀಪಗೊಳಿಸುವ ಆರಾಧನೆಗಳು. ಭಾಷಿಕ ಅರ್ಥದಲ್ಲಿ 'ವಸೀಲ' ಎಂದರೆ ಉದ್ದೇಶಿತ ಗುರಿಯೆಡೆಗೆ ತಲುಪಿಸುವ ವಸ್ತು. ಅಲ್ಲಾಹನ ತೃಪ್ತಿ ಮತ್ತು ಸ್ವರ್ಗದೆಡೆಗೆ ತಲುಪಿಸುವ ಸತ್ಕರ್ಮಗಳನ್ನು ಅಲ್ಲಾಹನ ಕಡೆಗಿರುವ ವಸೀಲ ಎನ್ನಲಾಗುತ್ತದೆ. ಅಲ್ಲಾಹನ ಕಡೆಗೆ ತಲುಪಿಸುವ ವಸೀಲಗಳನ್ನು ಹುಡುಕಿರಿ ಎಂದು ಈ ಆಯತ್‌ನಲ್ಲಿ ಹೇಳಲಾಗಿರುವುದು ಇದನ್ನೇ ಆಗಿದೆ.

ಆದರೆ ವಿತಂಡವಾದಿಗಳು ಮತ್ತು ವಕ್ರಮಾರ್ಗದಲ್ಲಿರುವವರು ಹೇಳುವ ಪ್ರಕಾರ 'ವಸೀಲ' ಎಂದರೆ ಅಲ್ಲಾಹು ಮತ್ತು ಮನುಷ್ಯರ ಮಧ್ಯೆ ಮಹಾಪುರುಷರು, ಸಜ್ಜನರು, ಮೃತರು ಮುಂತಾದವರನ್ನು ಮಧ್ಯವರ್ತಿಗಳನ್ನಾಗಿ ಮಾಡಿಕೊಳ್ಳುವುದು. ಅಲ್ಲಾಹನೆಡೆಗೆ ಸಮೀಪಗೊಳ್ಳಲು ಅವರು ಈ ಮಧ್ಯವರ್ತಿಗಳನ್ನು ಅವಲಂಬಿಸುತ್ತಾರೆ. ಅವರು ಹೇಳುತ್ತಾರೆ: "ನಾವು ಈ ಮಧ್ಯವರ್ತಿಗಳನ್ನು ಆರಾಧಿಸುವುದು ಇವರು ನಮ್ಮನ್ನು ಅಲ್ಲಾಹನಿಗೆ ಸಮೀಪಗೊಳಿಸುತ್ತಾರೆ ಎಂಬ ಉದ್ದೇಶದಿಂದ ಮಾತ್ರವಾಗಿದೆ."

ಈ ವಕ್ರಮಾರ್ಗಿಗಳ ಪ್ರಕಾರ 'ವಸೀಲ' ಎಂದರೆ ಅಲ್ಲಾಹು ಮತ್ತು ಮನುಷ್ಯರ ಮಧ್ಯೆ ಕೆಲವರನ್ನು ಮಧ್ಯವರ್ತಿಗಳನ್ನಾಗಿ ಮಾಡಿಕೊಳ್ಳುವುದು. ಅವರ ನಂಬಿಕೆ ಪ್ರಕಾರ ಈ ಮಧ್ಯವರ್ತಿಗಳನ್ನು ಇವರ ಬೇಕು ಬೇಡಗಳನ್ನು ಗುರುತಿಸಿ ಅವುಗಳನ್ನು ಅಲ್ಲಾಹನಿಗೆ ತಿಳಿಸಿಕೊಡುತ್ತಾರೆ. ಅಂದರೆ ಇವರ ಪ್ರಕಾರ ಅಲ್ಲಾಹನಿಗೆ ಅವನ ದಾಸರ ಬೇಕು ಬೇಡಗಳ ಬಗ್ಗೆ ಅರಿವಿಲ್ಲ. ಈ ಮಧ್ಯವರ್ತಿಗಳು ತಿಳಿಸಿದ ಬಳಿಕವೇ ಅವನಿಗೆ ಅದರ ಅರಿವು ಸಿಗುತ್ತದೆ. ಅಥವಾ ಇವರ ನಂಬಿಕೆ ಪ್ರಕಾರ ಅಲ್ಲಾಹು ಜಿಪುಣ. ಅವನೊಡನೆ ನೇರವಾಗಿ ಕೇಳಿದರೆ ಅವನು ಏನನ್ನೂ ಕೊಡುವುದಿಲ್ಲ. ಆದರೆ ಈ ಮಧ್ಯವರ್ತಿಗಳು ಪಟ್ಟುಹಿಡಿದು ಕೇಳಿದಾಗ ಅವನು ಅದನ್ನು ಕೊಡುತ್ತಾನೆ. ಈ ಕಾರಣದಿಂದಲೇ ಅವರು ಅಲ್ಲಾಹನನ್ನು ಇಹಲೋಕದ ರಾಜರಿಗೆ ಮತ್ತು ಅಧಿಕಾರಿಗಳಿಗೆ ಹೋಲಿಸುತ್ತಾರೆ. ಅವರು ಹೇಳುವ ಈ ಎಲ್ಲ ಮಾತುಗಳಿಂದಲೂ ಅಲ್ಲಾಹು(ﷻ) ಮಹೋನ್ನತನೂ ಪರಿಶುದ್ಧನೂ ಆಗಿದ್ದಾನೆ.

ಅಲ್ಲಾಹು(ﷻ) ಹೇಳುತ್ತಾನೆ:

﴿ أُولَٰٓئِكَ ٱلَّذِينَ يَدۡعُونَ يَبۡتَغُونَ إِلَىٰ رَبِّهِمُ ٱلۡوَسِيلَةَ ﴾

"ಅವರು ಯಾರನ್ನು ಕರೆದು ಪ್ರಾರ್ಥಿಸುತ್ತಿರುವರೋ ಅವರು ಅಲ್ಲಾಹನಿಗೆ ಸಮೀಪವಾಗುವ ದಾರಿಗಳನ್ನು ಹುಡುಕುತ್ತಿದ್ದಾರೆ." (ಅಲ್‌ಇಸ್ರಾಅ್ 57)

ಅಲ್ಲಾಹನ ಕಡೆಗೆ ಸಮೀಪಗೊಳಿಸುವ ಸತ್ಕರ್ಮಗಳನ್ನು ನಿರ್ವಹಿಸಬೇಕೆಂದು ಈ ಆಯತ್ ಸೂಚಿಸುತ್ತದೆ. ಕಾರಣ, ಅಲ್ಲಾಹು(ﷻ) ಈ ಕೃತ್ಯವನ್ನು ಪ್ರಶಂಸಿಸಿದ್ದಾನೆ. ಇನ್ನೊಂದು ಕಡೆ ಅವನು ಹೇಳುತ್ತಾನೆ:

﴿ يَـٰٓأَيُّهَا ٱلَّذِينَ ءَامَنُوا۟ ٱتَّقُوا۟ ٱللَّهَ وَٱبْتَغُوٓا۟ إِلَيْهِ ٱلْوَسِيلَةَ وَجَـٰهِدُوا۟ فِى سَبِيلِهِۦ ﴾

"ಓ ಸತ್ಯವಿಶ್ವಾಸಿಗಳೇ! ಅಲ್ಲಾಹನನ್ನು ಭಯಪಟ್ಟು ಜೀವಿಸಿರಿ. ಅವನ ಕಡೆಗೆ ಸಮೀಪವಾಗುವ ಮಾರ್ಗಗಳನ್ನು ಹುಡುಕಿರಿ ಮತ್ತು ಅವನ ಮಾರ್ಗದಲ್ಲಿ ಹೋರಾಡಿರಿ." (ಕುರ್‌ಆನ್ 5:35)

ವಕ್ರಮಾರ್ಗಿಗಳು ಹೇಳುತ್ತಾರೆ: "ವಸೀಲಗಳನ್ನು ಹುಡುಕಬೇಕೆಂದು ಅಲ್ಲಾಹು ಈ ಆಯತ್ತಿನಲ್ಲಿ ಆದೇಶಿಸದ್ದಾನೆ." ವಸೀಲ ಎಂದರೇನೆಂದು ಕೇಳಿದರೆ ಅವರು ಮಧ್ಯವರ್ತಿಗಳು ಎನ್ನುತ್ತಾರೆ. ಅವರು ಹೀಗೆ ಈ ಆಯತ್ತನ್ನು ದುರ್ವಾಖ್ಯಾನ ಮಾಡುತ್ತಾರೆ. ಆದರೆ ವಾಸ್ತವವಾಗಿ, ಕುರ್‌ಆನ್ ಮತ್ತು ಸುನ್ನತ್ತಿನಲ್ಲಿ ಹೇಳಲಾದ 'ವಸೀಲ' ಎನ್ನುವುದರ ಅರ್ಥ: ಅಲ್ಲಾಹನ ಕಡೆಗೆ ಸಮೀಪಗೊಳಿಸುವ ಸತ್ಕರ್ಮಗಳು. ಅಲ್ಲಾಹನ ಹೆಸರು ಮತ್ತು ಗುಣವಿಶೇಷಣಗಳನ್ನು ಮೂಲಕ ಅವನಲ್ಲಿ ಪ್ರಾರ್ಥಿಸುವುದು. ಇದು ನಿಜವಾದ ವಸೀಲ. ಇವರು ಹೇಳುವ ವಸೀಲ, ಅಂದರೆ ಮಧ್ಯವರ್ತಿಗಳ ಮೂಲಕ ಪ್ರಾರ್ಥಿಸುವ ವಸೀಲ ಇಸ್ಲಾಮಿನದ್ದಲ್ಲ. ಅದು ಶಿರ್ಕಿನ ಜನರು ಮಾಡುವ ವಸೀಲ. ಅವರ ಬಗ್ಗೆ ಅಲ್ಲಾಹು ಹೇಳುವುದು ನೋಡಿ:

﴿ وَيَعْبُدُونَ مِن دُونِ ٱللَّهِ مَا لَا يَضُرُّهُمْ وَلَا يَنفَعُهُمْ وَيَقُولُونَ هَـٰٓؤُلَآءِ شُفَعَـٰٓؤُنَا عِندَ ٱللَّهِ ۚ ﴾

"ಅವರು ಅಲ್ಲಾಹನನ್ನು ಬಿಟ್ಟು ತಮಗೆ ಯಾವುದೇ ಲಾಭವನ್ನು ತಂದುಕೊಡದ ಮತ್ತು ತಮ್ಮಿಂದ ಯಾವುದೇ ಹಾನಿಯನ್ನು ತಡೆಗಟ್ಟದವರನ್ನು ಆರಾಧಿಸುತ್ತಾರೆ. ಇವರು ನಮ್ಮನ್ನು ಅಲ್ಲಾಹನಿಗೆ ಸಮೀಪಗೊಳಿಸುತ್ತಾರೆ ಎಂದು ಅವರು ಹೇಳುತ್ತಾರೆ." (ಕುರ್‌ಆನ್ 10:18)

﴿ وَٱلَّذِينَ ٱتَّخَذُوا۟ مِن دُونِهِۦٓ أَوْلِيَآءَ مَا نَعْبُدُهُمْ إِلَّا لِيُقَرِّبُونَآ إِلَى ٱللَّهِ زُلْفَىٰٓ ﴾

"ಅಲ್ಲಾಹನನ್ನು ಬಿಟ್ಟು ಇತರರನ್ನು ರಕ್ಷಕರನ್ನಾಗಿ ಮಾಡಿಕೊಂಡವರು ಹೇಳುತ್ತಾರೆ: ನಾವು ಇವರನ್ನು ಆರಾಧಿಸುವುದು ಇವರು ನಮ್ಮನ್ನು ಅಲ್ಲಾಹನಿಗೆ ಸಮೀಪಗೊಳಿಸುತ್ತಾರೆ ಎಂಬ ನಂಬಿಕೆಯಿಂದ ಮಾತ್ರವಾಗಿದೆ." (ಕುರ್‌ಆನ್ 39:3)

ಮುಂಚಿನವರು ಮಾಡಿದ ಇದೇ ಶಿರ್ಕನ್ನು ಈಗಿನ ಜನರೂ ಮಾಡುತ್ತಿದ್ದಾರೆ. ಅವರು ಇದನ್ನು ವಸೀಲ ಎಂಬ ಹೆಸರಿನಿಂದ ಕರೆದರೂ ಸಹ ಇದು ಅದೇ ಶಿರ್ಕ್ ಆಗಿದೆ. ಇದು ಅಲ್ಲಾಹು ಧರ್ಮದಲ್ಲಿ ಆದೇಶಿಸಿದ ವಸೀಲ ಅಲ್ಲ. ಶಿರ್ಕ್ ಆಗಿರುವ ವಿಷಯವನ್ನು ಅಲ್ಲಾಹು ವಸೀಲ ಆಗಿ ಖಂಡಿತ ಮಾಡಲಾರ. ಕಾರಣ, ಶಿರ್ಕ್ ಅಲ್ಲಾಹನಿಂದ ದೂರಗೊಳಿಸುವ ಅಕ್ಷಮ್ಯ ಅಪರಾಧವಾಗಿದೆ. ಅಲ್ಲಾಹು(ﷻ) ಹೇಳುವುದು ನೋಡಿ:

﴿ إِنَّهُۥ مَن يُشْرِكْ بِٱللَّهِ فَقَدْ حَرَّمَ ٱللَّهُ عَلَيْهِ ٱلْجَنَّةَ وَمَأْوَىٰهُ ٱلنَّارُ ۖ وَمَا لِلظَّـٰلِمِينَ مِنْ أَنصَارٍ ٧٢ ﴾

"ಅಲ್ಲಾಹನೊಂದಿಗೆ ಪಾಲುದಾರಿಕೆ (ಶಿರ್ಕ್) ಮಾಡುವವರಿಗೆ ಅಲ್ಲಾಹು ಸ್ವರ್ಗವನ್ನು ನಿಷಿದ್ಧಗೊಳಿಸಿದ್ದಾನೆ. ಅವರ ವಾಸಸ್ಥಳ ನರಕಾಗ್ನಿಯಾಗಿದೆ. ಅವರಿಗೆ ಸಹಾಯಕರಾಗಿ ಯಾರೂ ಇರಲಾರರು." (ಕುರ್‌ಆನ್ 5:72)

ಇಂತಹ ಒಂದು ಶಿರ್ಕನ್ನು ಅಲ್ಲಾಹು ವಸೀಲ ಆಗಿ ಮಾಡಲು ಖಂಡಿತ ಸಾಧ್ಯವಿಲ್ಲ. ಅವರು ಹೇಳುವ ಆ ಮಾತುಗಳಿಂದ ಅಲ್ಲಾಹು ಅತ್ಯುನ್ನತನೂ ಪರಿಶುದ್ಧನೂ ಆಗಿದ್ದಾನೆ.

ಮಹಾಪುರುಷರನ್ನು ಆರಾಧಿಸುವ ಜನರೂ ಇದ್ದಾರೆನ್ನುವುದಕ್ಕೆ ಈ ಆಯತ್ ಪುರಾವೆಯಾಗಿದೆ. ಕಾರಣ, ಅಲ್ಲಾಹು(ﷻ) ಅದನ್ನು ಸ್ಪಷ್ಟವಾಗಿ ತಿಳಿಸಿದ್ದಾನೆ. ಈ ಜನರು ಯಾರನ್ನು ಆರಾಧಿಸುತ್ತಿದ್ದಾರೋ ಆ ಮಹಾಪುರುಷರು ಅಲ್ಲಾಹನ ದಾಸರಾಗಿದ್ದಾರೆ. ಅವರೆಲ್ಲರೂ ಅಲ್ಲಾಹನನ್ನು ಅವಲಂಬಿಸಿದ್ದಾರೆ. ಅವರು ಅಲ್ಲಾಹನ ಕಡೆಗೆ ಸಮೀಪಗೊಳಿಸುವ ಮಾರ್ಗಗಳನ್ನು ಹುಡುಕುತ್ತಿದ್ದಾರೆ. ಆರಾಧನೆಗಳ ಮೂಲಕ ಅಲ್ಲಾಹನಿಗೆ ಸಮೀಪವಾಗಲು ಸ್ಪರ್ಧಿಸುತ್ತಿದ್ದಾರೆ. ತಮ್ಮ ಎಲ್ಲ ಅಗತ್ಯಗಳನ್ನೂ ಅಲ್ಲಾಹನಲ್ಲಿ ಬೇಡುತ್ತಾರೆ. ಅವನ ದಯೆಯನ್ನು ಆಶಿಸುತ್ತಾರೆ. ಅವನ ಶಿಕ್ಷೆಯನ್ನು ಭಯಪಡುತ್ತಾರೆ. ಯಾರ ಸ್ಥಿತಿ ಹೀಗಿದೆಯೋ ಅವರೆಂದೂ ಆರಾಧಿಸಲ್ಪಡಲು ಅಥವಾ ಪ್ರಾರ್ಥಿಸಲ್ಪಡಲು ಅರ್ಹರಲ್ಲವೆಂದು ಅಲ್ಲಾಹು ಇಲ್ಲಿ ಹೇಳುತ್ತಿದ್ದಾನೆ. ■

# ಇದ್ದಃ ಅಥವಾ ನಿರೀಕ್ಷಾಕಾಲ

ಮರಣ ಅಥವಾ ವಿವಾಹ ವಿಮೋಚನೆಯಿಂದಾಗಿ ಸ್ತ್ರೀಯೊಬ್ಬಳು ಪತಿಯೊಂದಿಗಿನ ಸಂಬಂಧವನ್ನು ಕಳಚಿಕೊಂಡಾಗ ಪುನರ್ವಿವಾಹವಾಗದೆ ಕಾಯುವ ನಿಶ್ಚಿತ ಕಾಲಕ್ಕೆ ನಿರೀಕ್ಷೆಯ ಕಾಲ(ಇದ್ದಃ) ಎನ್ನಲಾಗುತ್ತದೆ. ಪತಿ ಮರಣಹೊಂದಿದರೆ ಅಥವಾ ವಿವಾಹ ವಿಮೋಚನೆ ನಡೆಸಿದರೆ ಸ್ತ್ರೀಯೊಬ್ಬಳು ಕಡ್ಡಾಯವಾಗಿ ಇದ್ದಃ ಆಚರಿಸಬೇಕೆಂದು ಪವಿತ್ರ ಕುರ್‌ಆನ್ ಮತ್ತು ಪ್ರವಾದಿಚರ್ಯೆಯಲ್ಲಿ ಸ್ಪಷ್ಟವಿದೆ. ಇಂತಹ ಪರಿಸ್ಥಿತಿಯಲ್ಲಿ ಸ್ತ್ರೀಯೊಬ್ಬಳು ಪ್ರಜ್ಞಾಪೂರ್ವಕವಾಗಿ ಇದ್ದಃ ಆಚರಿಸಲು ನಿರಾಕರಿಸಿದರೆ ಆಕೆ ತಪ್ಪಿತಸ್ಥಳಾಗುತ್ತಾಳೆ. ಪಶ್ಚಾತ್ತಾಪ ಪಡುವುದು ಆಕೆಗೆ ಕಡ್ಡಾಯವಾಗಿದೆ.

## ಇದ್ದಃದ ಲಕ್ಷಣಗಳು:

ಇದ್ದಃಕ್ಕೆ ಹಲವಾರು ಲಕ್ಷಣಗಳಿವೆ. ಅವುಗಳ ಪೈಕಿ ಕೆಲವು ಪ್ರಮುಖವಾದವುಗಳನ್ನು ಗಮನಿಸಿರಿ.

1. ಪ್ರಥಮ ಮತ್ತು ಪ್ರಮುಖವಾಗಿ ಅಲ್ಲಾಹನ ದಾಸರು ಅವನನ್ನು ಅನುಸರಿಸಬೇಕಾಗಿದೆ. ಮರಣ, ತ್ವಲಾಖ್ ಮುಂತಾದವುಗಳಿಗೆ ಸಂಬಂಧಿಸಿದಂತೆ ಇದ್ದಃವು ಸತ್ಯವಿಶ್ವಾಸಿಯ ಅನುಸರಣೆಯ ಪ್ರಕಟನೆಯಾಗಿದೆ.

2. ಮರಣ ಅಥವಾ ವಿವಾಹ ವಿಮೋಚನೆಯ ಮೂಲಕ ಪತಿಯೊಂದಿಗಿನ ಸಂಬಂಧವು ಬೇರ್ಪಡುವಾಗ ತಾನು ಅವನಿಂದ ಗರ್ಭಿಣಿಯಾಗಿದ್ದೇನೆಯೇ ಎಂದು ತಿಳಿಯುವುದು, ಜನಿಸುವ ಮಗುವಿಗೆ ಲಭಿಸುವ ಪಿತ್ರಾರ್ಜಿತ ಸೊತ್ತಿಗೆ ಹಾನಿಯಾಗದಿರುವಂತೆ ನೋಡಿಕೊಳ್ಳುವುದು, ರಕ್ತ ಸಂಬಂಧಕ್ಕೆ ಕೇಡು ಸಂಭವಿಸದಂತೆ ಎಚ್ಚರ ವಹಿಸುವುದು ಇದ್ದಃ ಆಚರಿಸುವ ಹಿನ್ನಲೆಯಲ್ಲಿರುವ ಉದ್ದೇಶವಾಗಿದೆ.

3. ಒಂದು ಮತ್ತು ಎರಡು ತಲಾಖ್‌ನ ಭಾಗವಾಗಿ ಇದ್ದಃ ಆಚರಿಸುತ್ತಿರುವುದಾದರೆ ದಂಪತಿಗಳಲ್ಲಿ ಸಂಭವಿಸಿದ ಮನಸ್ತಾಪಗಳನ್ನು ಪರಸ್ಪರ ಬಗೆಹರಿಸಲು ಹಾಗೂ ವಿಚ್ಛೇದಿಸಲ್ಪಟ್ಟ ಸಂಬಂಧವನ್ನು ಜೋಡಿಸುವ ಅವಕಾಶವನ್ನು ನಿರ್ಮಿಸುವುದು.

4. ಸಂಬಂಧಗಳು ಪವಿತ್ರವಾಗಿದ್ದು, ವಿವಾಹ ಮತ್ತು ತಲಾಖ್ ಒಂದು ಆಟವಲ್ಲವೆಂದು ಮನವರಿಕೆ ಮಾಡಿಕೊಡುವುದು.

5. ಅಲ್ಲಾಹನು ತನಗೆ ದಯಪಾಲಿಸಿದ, ಅವನ ಅನುಗ್ರಹವಾದ ತನ್ನ ಜೋಡಿಯನ್ನು ಕಳೆದುಕೊಳ್ಳುವಾಗ ಪಾಲುದಾರರಾದ ಒಬ್ಬರಿಗೆ ದುಃಖವಾಗುವುದು ಮನುಷ್ಯ ಸಹಜವಾಗಿದೆ. ಆ ದುಃಖವನ್ನು ಗೌರವಾನ್ವಿತ ರೂಪದಲ್ಲಿ ಆಚರಿಸಲು ಅವಕಾಶ ಕೊಡುವುದು ಕೂಡಾ ಇದ್ದಃದ ಲಕ್ಷಣಗಳಲ್ಲಿ ಒಳಪಡುತ್ತದೆ.

## ವಿಧವೆ ಮತ್ತು ನಿರೀಕ್ಷಾಕಾಲ:

ವಿಧವೆಯರ ಪರಿಸ್ಥಿತಿಯ ವ್ಯತ್ಯಾಸಕ್ಕನುಗುಣವಾಗಿ ಇದ್ದಃದ ಕಾಲಾವಧಿಯಲ್ಲಿಯೂ ಬದಲಾವಣೆ ಸಂಭವಿಸುತ್ತದೆ. ಸಾಮಾನ್ಯ ಪರಿಸ್ಥಿತಿಯಲ್ಲಿ ವಿಧವೆಯರು ನಾಲ್ಕು ತಿಂಗಳು ಮತ್ತು ಹತ್ತು ದಿನ ಇದ್ದಃ ಅನುಸರಿಸಬೇಕು.

ಪವಿತ್ರ ಕುರ್‌ಆನ್ ಹೇಳುತ್ತದೆ:

﴿وَٱلَّذِينَ يُتَوَفَّوْنَ مِنكُمْ وَيَذَرُونَ أَزْوَٰجًا



“ನಿಮ್ಮಲ್ಲಿ ಯಾರಾದರೂ ಮೃತಪಟ್ಟರೆ ಮತ್ತು ಅವರ ಪತ್ನಿಯರು ಜೀವಂತವಿದ್ದರೆ, ಅವರು (ಪತ್ನಿಯರು) ನಾಲ್ಕು ತಿಂಗಳು ಹತ್ತು ದಿನಗಳ ತನಕ ತಮ್ಮನ್ನು ತಾವೇ ತಡೆದಿರಿಸಿಕೊಳ್ಳಬೇಕು.” (2:234)

ಪತಿಯು ಮರಣ ಹೊಂದುವ ಸಮಯದಲ್ಲಿ ಮುಟ್ಟಿನ ಅವಸ್ಥೆಯಲ್ಲಿರುವವರು, ಗರ್ಭಿಣಿಗಳಲ್ಲದವರು, ಪ್ರಾಯದ ಹೆಚ್ಚಳದಿಂದ ಮುಟ್ಟು ನಿಂತವರು, ವಿವಾಹದ ನಂತರ ಲೈಂಗಿಕ ಸಂಪರ್ಕದಲ್ಲಿ ಏರ್ಪಡುವುದಕ್ಕಿಂದ ಮೊದಲೇ ಪತಿಯನ್ನು ಕಳೆದುಕೊಂಡವರು ಈ ವಿಧಿಯ ಪರಿಧಿಯಲ್ಲಿ ಒಳಪಡುತ್ತಾರೆ.

ಪರಸ್ಪರ ಮಾತುಕತೆ ಇಲ್ಲ, ಅವರ ಮಧ್ಯೆಯ ಲೈಂಗಿಕ ಸಂಪರ್ಕವಿಲ್ಲ, ತಲಾಖ್ ನಡೆಯಲೂ ಇಲ್ಲ, ಇಂತಹ ಪರಿಸ್ಥಿತಿಯಲ್ಲಿ ವಿಧವೆಯಾದವರು ನಾಲ್ಕು ತಿಂಗಳು ಹತ್ತು ದಿನ ಇದ್ದಃ ಆಚರಿಸಬೇಕಾಗಿದೆ.

ಆದರೆ ಪತಿಯು ಮೃತಪಡುವಾಗ ಮಹಿಳೆಯು ಗರ್ಭಿಣಿಯಾಗಿದ್ದರೆ ಆಕೆಯ ಇದ್ದಃದ ಕಾಲಾವಧಿ ಹೆರಿಗೆಯ ತನಕವಾಗಿರುತ್ತದೆ. ಪತಿಯು ಮೃತಪಟ್ಟ ಮರುದಿನ ಆಕೆಗೆ ಹೆರಿಗೆಯಾದರೆ ಅವಳ ಇದ್ದಃದ ಅವಧಿ ಕೊನೆಗೊಳ್ಳುತ್ತದೆ. ಇದು ಸಅದ್ ಬಿನ್ ಖೌಲ(ؓ) ರವರ ಪತ್ನಿಯಾಗಿದ್ದ ಝುಬೈಅತ್ತುಲ್ ಅಸ್ಲಮಿಯವರ ಸಂಭವದಿಂದ ವ್ಯಕ್ತವಿದೆ. ಇಮಾಮ್ ಬುಖಾರಿ ತಮ್ಮ ಸ್ವಹೀಹ್‌ನಲ್ಲಿ ಉಲ್ಲೇಖಿಸಿದ ಹದೀಸ್‌ನ ಸಂಕ್ಷಿಪ್ತ ರೂಪವನ್ನು ನೋಡಿರಿ.

ಸಅದ್(ؓ) ರವರು ಮೃತಪಟ್ಟ ಕೆಲವು ದಿನಗಳಲ್ಲಿಯೇ ಅವರ ಪತ್ನಿಯಾಗಿದ್ದ ಝುಬೈಅ(ؓ) ರವರಿಗೆ ಹೆರಿಗೆಯಾಯಿತು. ಅನಂತರ ಝುಬೈಅ(ؓ) ಪುನರ್ವಿವಾಹಕ್ಕೆ ಸಿದ್ಧರಾದರು. ನಾಲ್ಕು ತಿಂಗಳು ಹತ್ತು ದಿನ ಇದ್ದಃ ಆಚರಿಸದ ಕಾರಣ ಬನೂದ್ದಾರ್ ಗೋತ್ರದ ಬಕರ್‌ರವರ ಪುತ್ರ ಅಬೂ ಸನಾಬಿಲ್ ಝುಬೈಅ(ؓ) ರವರನ್ನು ಟೀಕಿಸಿ ಮಾತನಾಡಿದರು.

ಈ ಸಂದರ್ಭದಲ್ಲಿ ಝುಬೈಅ(ؓ) ಪ್ರವಾದಿ(ﷺ) ರವರ ಸನ್ನಿಧಿಗೆ ತೆರಳಿ ಪ್ರಸ್ತುತ ವಿಷಯದಲ್ಲಿ ಧಾರ್ಮಿಕ ವಿಧಿಯ ಕುರಿತು ವಿಚಾರಿಸಿದರು. ಆಗ ಪ್ರವಾದಿ(ﷺ) ರವರು ಹೇಳಿದ್ದನ್ನು ಝುಬೈಅ(ؓ) ತಮ್ಮ ಮಾತುಗಳಲ್ಲಿ ಹೀಗೆ ವಿವರಿಸುತ್ತಾರೆ. “ನನಗೆ ಹೆರಿಗೆಯಾಗುವುದರೊಂದಿಗೆ ನನ್ನ ಇದ್ದಃ ಕೊನೆಗೊಂಡಿತು. ಪ್ರವಾದಿ(ﷺ) ರವರು ನನ್ನೊಂದಿಗೆ ಪುನರ್ವಿವಾಹವಾಗಲು ಆದೇಶಿಸಿದರು.”

ಒಬ್ಬರು ಮೃತಪಟ್ಟ ಸುದ್ದಿ ಆ ಕ್ಷಣಕ್ಕೆ ಊರಿಗೆ ತಿಳಿಯದೆ, ತುಂಬಾ ಕಾಲದ ಬಳಿಕ ತಿಳಿಯಿತು ಎಂದಿಟ್ಟುಕೊಳ್ಳೋಣ. ಇಂತಹ ಪರಿಸ್ಥಿತಿಯಲ್ಲಿ ಅವರ ಪತ್ನಿ ಇದ್ದಃ ಆಚರಿಸಬೇಕಾಗಿಲ್ಲ. ಇನ್ನು ಆಕೆಯ ಇದ್ದಃದ ಕಾಲಾವಧಿ ಮುಗಿಯುವುದಕ್ಕಿಂತ ಮೊದಲು ಆ ಸುದ್ದಿ ತಿಳಿದರೆ ಅದರಲ್ಲಿ ಉಳಿಯುವ ದಿನಗಳಲ್ಲಿ ಅವಳು ಇದ್ದಃ ಆಚರಿಸಬೇಕು. ನಷ್ಟವಾದ ದಿನಗಳನ್ನು ನಂತರ ಆಚರಿಸುವ ಮೂಲಕ ಭರ್ತಿಗೊಳಿಸಬೇಕಾದ ಅಗತ್ಯವಿಲ್ಲ.

ಅಕಾರಣವಾಗಿ ಋತುಬಂಧ (ಮುಟ್ಟು ನಿಲ್ಲುವುದು) ಸಂಭವಿಸಿ, ಇದರ ಕಾರಣವನ್ನು ತಿಳಿಯದಿರುವ ಪರಿಸ್ಥಿತಿ ವಿರಳವಾಗಿದ್ದರೂ, ಕೆಲವು ಸ್ತ್ರೀಯರಲ್ಲಿ ಕಂಡುಬರುವುದಿದೆ. ಇಂತಹ ಅವಸ್ಥೆಯಲ್ಲಿ ಒಬ್ಬಳ ಗಂಡ ಮೃತಪಟ್ಟರೆ ಆಕೆ ಚಾಂದ್ರಮಾನ ಪ್ರಕಾರ ಒಂದು ವರ್ಷ ಇದ್ದಃ ಆಚರಿಸಬೇಕಾಗಿದೆ.

ಸ್ತನಪಾನ, ಕಾಯಿಲೆ ಮುಂತಾದ ಕಾರಣಗಳಿಂದ ತಾತ್ಕಾಲಿಕವಾಗಿ ಮುಟ್ಟು ನಿಂತ ಅವಸ್ಥೆಯಲ್ಲಿ ಒಬ್ಬಳು ವಿಧವೆಯಾದರೆ ಆಕೆಯ ಇದ್ದಃದ ಅವಧಿ ನಾಲ್ಕು ತಿಂಗಳು ಹತ್ತು ದಿನವೇ ಆಗಿರುತ್ತದೆ. ತನ್ಮಧ್ಯೆ ಆಕೆಗೆ ಮಾಸಿಕ ಮುಟ್ಟು ಆಗದಿದ್ದರೆ ಅದು ಆಗುವ ತನಕ ಅವಳು ಇದ್ದಃ ಆಚರಿಸಬೇಕು.

ಪ್ರಸ್ತುತ ವಿಷಯದಲ್ಲಿ ಮಹಾತ್ಮರಾದ ಉಮರ್(ؓ), ಉಸ್ಮಾನ್(ؓ), ಅಲಿ(ؓ) ಮುಂತಾದವರು ಹೀಗೆ ವಿಧಿ ನೀಡಿದ್ದಾರೆ.

## ವಿವಾಹ ವಿಮೋಚಿತೆ ಇದ್ದಃ ಆಚರಿಸುವ ನಡುವೆ ಪತಿ ಮೃತಪಟ್ಟರೆ:

ಒಂದು ಮತ್ತು ಎರಡನೇ ತ್ವಲಾಖ್ (ವಿವಾಹ ವಿಮೋಚನೆ) ನ ಇದ್ದಃ ಆಚರಿಸುವ ಸಂದರ್ಭದಲ್ಲಿ ಪತಿ ಮೃತಪಟ್ಟರೆ ಆಕೆ ಆ ಕ್ಷಣದಿಂದ ನಾಲ್ಕು ತಿಂಗಳು ಹತ್ತು ದಿನ ಇದ್ದಃ ಆಚರಿಸಬೇಕು.

ಆಕೆ ಗರ್ಭಿಣಿಯಾಗಿದ್ದರೆ ಹೆರಿಗೆಯ ತನಕ ಇದ್ದಃದ ಕಾಲಾವಧಿಯಾಗಿದೆ. ಆಕೆ ಗಂಡನ ವಾರೀಸು ಸೊತ್ತಿಗೆ ಅರ್ಹಳೂ ಆಗಿರುತ್ತಾಳೆ. ಆದರೆ ಮೊದಲೇ ತ್ವಲಾಖ್‌ನ ಇದ್ದಃದ ಸಂದರ್ಭದಲ್ಲಿ ಗಂಡ ಮೃತಪಟ್ಟರೆ ವಿಧವೆ ಎಂಬ ನೆಲೆಯಲ್ಲಿ ಆಕೆ ಇದ್ದಃ ಆಚರಿಸಬೇಕಾಗಿಲ್ಲ. ಆಕೆಗೆ ಗಂಡನ ವಾರೀಸು ಸೊತ್ತಿನಲ್ಲಿ ಹಕ್ಕೂ ಇರುವುದಿಲ್ಲ.

## ಇದ್ದಃದ ಶಿಷ್ಟಾಚಾರಗಳು:

ಇದ್ದಃಕ್ಕೆ ಸಂಬಂಧಪಟ್ಟಂತೆ ಇಸ್ಲಾಮ್ ಕಲಿಸಿರದ ಹಲವಾರು ದುರಾಚಾರ ಮತ್ತು ಕಟ್ಟುಪಾಡುಗಳು ಮುಸ್ಲಿಮ್ ಸಮುದಾಯದಲ್ಲಿ

ನೆಲೆನಿಂತಿದೆ. ಇದ್ದಃವು ಒಂದು ಆರಾಧನೆಯಾಗಿರುವುದರಿಂದ ಇಸ್ಲಾಮ್ ಕಲಿಸದ ಯಾವುದೇ ಕಾರ್ಯವನ್ನು ಅದರ ಜೊತೆಯಲ್ಲಿ ಕಲಬೆರಕೆ ಮಾಡಬಾರದು. ಅದು ಬಿದ್‌ಅತ್ (ನವೀನಾಚಾರ) ಆಗಿ ಪರಿಗಣಿಸಲ್ಪಡುತ್ತದೆ. ಇಂತಹ ಆಚರಣೆಗಳಿಗೆ ಪುಣ್ಯವಲ್ಲ, ಬದಲಾಗಿ ಶಿಕ್ಷೆ ಲಭಿಸುತ್ತದೆ.

ಪತಿಯ ಮರಣದೊಂದಿಗೆ ವಿಧವೆಯ ಇದ್ದಃ ಆರಂಭವಾಗುತ್ತದೆ. ಹಲವೊಮ್ಮೆ ನಮ್ಮ ಊರುಗಳಲ್ಲಿ ಮಯ್ಯಿತ್ತನ್ನು ಮನೆಯಿಂದ ಹೊರಗಿಟ್ಟ ಬಳಿಕ ಅಥವಾ ದಫನದ ಬಳಿಕ ಇದ್ದಃವನ್ನು ಆರಂಭಿಸಲಾಗುತ್ತದೆ. ಇದು ಸರಿಯಲ್ಲ.

ಇದ್ದಃಕ್ಕಾಗಿ ಪ್ರತ್ಯೇಕ ಸ್ನಾನ ಮಾಡಬಹುದಾಗಿದೆ. ಹಾಗೆಯೇ ಪ್ರತ್ಯೇಕ ಬಣ್ಣವಿರುವ ವಸ್ತ್ರವನ್ನು ಧರಿಸಬಹುದಾಗಿದೆ. ಆದರೆ ಅಂದದ, ತನ್ನ ದೇಹದ ಸೌಂದರ್ಯವನ್ನು ವರ್ಧಿಸುವ ವಸ್ತ್ರ ಅಥವಾ ಇನ್ನಿತರ ವಸ್ತುಗಳನ್ನು ಇದ್ದಃದ ಕಾಲದಲ್ಲಿ ಉಪಯೋಗಿಸಬಾರದೆಂದು ಪ್ರವಾದಿ(ﷺ) ರವರು ಹೇಳಿದ್ದಾರೆ.

ಉಮ್ಮು ಸಲಮ(ﷺ) ಅವರಿಂದ ನಿವೇದನೆ: ಪ್ರವಾದಿ(ﷺ) ರವರು ಹೇಳುತ್ತಾರೆ: "ಪತಿ ಮೃತಪಟ್ಟ ಸ್ತ್ರೀ (ಇದ್ದಃದ ಕಾಲಾವಧಿಯಲ್ಲಿ) ಹಳದಿ, ಕೆಂಪು ಬಣ್ಣವಿರುವ (ಅಂದದ) ವಸ್ತ್ರಗಳನ್ನು ತೊಡುವುದಾಗಲೀ, ಆಭರಣಗಳನ್ನು ಧರಿಸುವುದಾಗಲೀ, ಸುರುಮ ಉಪಯೋಗಿಸುವುದಾಗಲೀ ಸಲ್ಲದು." (ಅಬೂದಾವೂದ್)

ಹಾಗೆಯೇ ಪರಿಮಳ ಹರಡುವ ಎಣ್ಣೆಗಳು ಮತ್ತಿತರ ಸುಗಂಧದ ವಸ್ತುಗಳನ್ನು ಈ ಅವಧಿಯಲ್ಲಿ ತೊರೆಯಬೇಕು. ಹೆಚ್ಚು ಸಮಯ ಪರಿಮಳ ಉಳಿದಿರದ ಸೋಪು ಮತ್ತು ಶಾಂಪೂಗಳನ್ನು ಉಪಯೋಗಿಸಿ ಸ್ನಾನ ಮಾಡುವುದರಲ್ಲಿ ವಿರೋಧವಿಲ್ಲ ಎನ್ನುವುದು ಆಧುನಿಕ ವಿದ್ವಾಂಸರ ಅಭಿಮತವಾಗಿದೆ.

ವಿಧವೆಯರು ಅವರ ಪತಿಯ ಮನೆಯಲ್ಲಿ ಇದ್ದಃ ಆಚರಿಸಬೇಕಾಗಿದೆ. ಧಾರ್ಮಿಕ ಮತ್ತು ದೈಹಿಕ ನಿರ್ಭಯತೆ ನಷ್ಟವಾಗುವ ತನಕ ಪತಿಯ ಮನೆಯನ್ನು ತೊರೆದು ಬೇರೆಡೆಗಳಲ್ಲಿ ಇದ್ದಃ ಆಚರಿಸುವುದು ಇಸ್ಲಾಮಿನ ದೃಷ್ಟಿಯಲ್ಲಿ ತಪ್ಪಾಗಿದೆ. ಇಮಾಮ್ ಅಬೂ ದಾವೂದ್ ಉಲ್ಲೇಖಿಸಿದ ಒಂದು ಹದೀಸ್‌ನ ಸಂಕ್ಷಿಪ್ತ ರೂಪ ಹೀಗಿದೆ.

ಫರೀಅ ಬಿಂತ್ ಮಾಲಿಕ್(ﷺ) ರವರ ಪತಿ ಪ್ರವಾದಿ(ﷺ) ರವರ ಕಾಲದಲ್ಲಿ ನಡೆದ ಯುದ್ಧವೊಂದರಲ್ಲಿ ಮೃತಪಟ್ಟರು. ಅವರು ಪ್ರವಾದಿ(ﷺ) ರವರೊಂದಿಗೆ ಸಹೋದರರ ಮನೆಯಲ್ಲಿ ಇದ್ದಃ ಆಚರಿಸುವ ಅನುಮತಿ ಕೇಳಿದರು. ಪ್ರವಾದಿ(ﷺ) ರವರು ಮೊದಲು ಅನುಮತಿ ನೀಡಿದರು. ಆ ಮಹಿಳೆ ಹಿಂದಿರುಗುವಾಗ ಪ್ರವಾದಿ(ﷺ) ರವರು ಆಕೆಯನ್ನು ಕರೆದು ಇದ್ದಃ ಕಾಲವು ಮುಕ್ತಾಯವಾಗುವ ತನಕ ಪತಿಯ ಮನೆಯಲ್ಲಿಯೇ ವಾಸಿಸಲು ಹೇಳಿದರು. ಹೀಗೆ ಅವರು ನಾಲ್ಕು ತಿಂಗಳು ಹತ್ತು ದಿನ ಪತಿಯ ಮನೆಯಲ್ಲಿಯೇ ಇದ್ದಃ ಆಚರಿಸಿದರು.

ಇದ್ದಃದ ಕಾಲದಲ್ಲಿ ಆರಾಧನಾ ಕ್ರಮಗಳನ್ನು ನಿರ್ವಹಿಸಲು ಮಸೀದಿಗೆ ತೆರಳುವುದು ಅನುಚಿತವಾಗಿದೆ. ಪ್ರಸ್ತುತ ಕಾಲಾವಧಿಯಲ್ಲಿ ಹಜ್ಜ್ ಉಮ್ರ ಕರ್ಮಗಳನ್ನು ನಿರ್ವಹಿಸಲು ಹೊರಡುವುದೂ ನಿಷಿದ್ಧವಾಗಿದೆ. ಆದರೆ ಚಿಕಿತ್ಸೆಯಂತಹ ಅತ್ಯಾವಶ್ಯಕ ಘಟ್ಟಗಳಲ್ಲಿ ಮನೆಯಿಂದ ಹೊರ ಹೋಗುವುದರಲ್ಲಿ ವಿರೋಧವಿಲ್ಲ.

ಹಾಗೆಯೇ ಅಧ್ಯಯನ, ಪರೀಕ್ಷೆಯಲ್ಲಿ ಪಾಲ್ಗೊಳ್ಳುವುದು ಮುಂತಾದ ಕಾರ್ಯಗಳಿಗೆ ಇದ್ದಃದ ಶಿಷ್ಟಾಚಾರವನ್ನು ಪಾಲಿಸಿಕೊಂಡು ಹೊರ ಹೋಗುವುದು ವಿರೋಧಿಸಲ್ಪಟ್ಟ ಕಾರ್ಯವಲ್ಲ ಎಂಬ ವಿದ್ವಾಂಸರ ಅಭಿಪ್ರಾಯವು ಪ್ರಸ್ತುತ ವಿಷಯದಲ್ಲಿ ಸರಿಯಾದ ನಿಲುವಾಗಿದೆ.

ಇದ್ದಃ ಕಳೆಯುವುದಕ್ಕಿಂತ ಮೊದಲು ವಿಧವೆಯನ್ನು ಬೇರೆಯವರು ವರಿಸಿಕೊಳ್ಳುವುದು ನಿಷೇಧಿಸಲ್ಪಟ್ಟ (ಹರಾಮ್) ಕಾರ್ಯವಾಗಿದೆ. ಇಂತಹ ಪರಿಸ್ಥಿತಿಯಲ್ಲಿ ನಡೆದ ವಿವಾಹಗಳು ಇಸ್ಲಾಮಿನ ದೃಷ್ಟಿಯಲ್ಲಿ ಅಸಿಂಧುವಾಗಿದೆ. ಹೀಗೆ ವಿವಾಹಿತರಾದವರು ಪಶ್ಚಾತ್ತಾಪಪಟ್ಟು ಮರಳಬೇಕು. ಅನಂತರ ಅವರ ವಿವಾಹ ಸಂಬಂಧ ಮುಂದುವರಿಯಬೇಕಾದರೆ ಇದ್ದಃದ ಬಳಿಕ ಹೊಸತಾಗಿ ವಿವಾಹವಾಗಬೇಕು.

ಇದ್ದಃದ ಕಾಲ ಹಾಗೂ ಇಂತಹ ಅವಸ್ಥೆಯಲ್ಲಿ ವಿವಾಹ ಸಂಬಂಧವು ಅನುವದನೀಯವಾದ ಪುರುಷರೊಂದಿಗೆ ಒಂದೇ ರೂಪದಲ್ಲಿ ವ್ಯವಹರಿಸಬೇಕಾಗಿದೆ. ಇದ್ದಃದ ಕಾಲದಲ್ಲಿ ಪ್ರತ್ಯೇಕ ಜಾಗರೂಕತೆ, ಅಲ್ಲದ ಸಮಯದಲ್ಲಿ ಪ್ರತ್ಯೇಕ ಸ್ವಾತಂತ್ರ್ಯವನ್ನು ಇಸ್ಲಾಮ್ ನೀಡುವುದಿಲ್ಲ.

ಪತಿಯಿಲ್ಲದ ಯಾರು ಮೃತಪಟ್ಟರೂ, ಮೂರು ದಿನಗಳಿಗಿಂತ ಹೆಚ್ಚಿನ ಅವಧಿ ದುಃಖ ಆಚರಿಸಲು ಧರ್ಮವು ಯಾರಿಗೂ ಅನುಮತಿ ನೀಡುವುದಿಲ್ಲವೆಂದು ಪ್ರವಾದಿ ವಚನಗಳು ನಮಗೆ ಕಲಿಸಿಕೊಡುತ್ತದೆ. ಧರ್ಮಕ್ಕೆ ಅಪರಿಚಿತವಾದ ಊರಿನ ನಡಾವಳಿ ಕ್ರಮಗಳನ್ನು ಸೇರಿಸುವುದನ್ನು ಇಂತಹ ಕಾರ್ಯಗಳಲ್ಲಿಯೂ ವರ್ಜಿಸಬೇಕಾಗಿದೆ. ಅನ್ಯಥಾ ಅದು ಕರ್ಮಗಳ ಸ್ವೀಕಾರಾರ್ಹತೆಗೆ ಪ್ರತಿಕೂಲವಾಗಿ ಪರಿಣಮಿಸುತ್ತದೆಯೆಂದು ತಿಳಿದಿರಬೇಕಾಗಿದೆ. ■

# ಮಾನಸಿಕ ಆರೋಗ್ಯ

﴿لَقَدْ جَاءَكُمْ رَسُولٌ مِّنْ أَنفُسِكُمْ عَزِيزٌ عَلَيْهِ مَا عَنِتُّمْ حَرِيصٌ عَلَيْكُم بِالْمُؤْمِنِينَ رَءُوفٌ رَّحِيمٌ ﴿١٢٨﴾

“ನಿಮ್ಮ ಬಳಿಗೆ ಓರ್ವ ಸಂದೇಶವಾಹಕರು ಬಂದಿರುತ್ತಾರೆ. ಅವರು ನಿಮ್ಮವರಿಂದಲೇ ಆಗಿರುತ್ತಾರೆ. ನೀವು ನಷ್ಟ ಹೊಂದುವುದು ಅವರಿಗೆ ಅಸಹನೀಯವಾಗಿದೆ. ಅವರು ನಿಮ್ಮ ಯಶಸ್ಸಿಗೆ ಹಂಬಲಿಸುವವರಾಗಿದ್ದಾರೆ. ಅವರು ಸತ್ಯವಿಶ್ವಾಸಿಗಳಿಗೆ ವತ್ಸಲರೂ ಕರುಣಾಳುವೂ ಆಗಿರುತ್ತಾರೆ.” (9:128)

ದೈಹಿಕ ಆರೋಗ್ಯಕ್ಕಿಂತ ನಾವು ಮಾನಸಿಕ ಆರೋಗ್ಯಕ್ಕೆ ಹೆಚ್ಚಿನ ಗಮನ ನೀಡಬೇಕಾಗಿದೆ. ಅದು ರೋಗಗ್ರಸ್ತವಾದರೆ ಇಡೀ ದೇಹಕ್ಕೆ ಕೇಡು ಸಂಭವಿಸುವುದು. ಅದು ಆರೋಗ್ಯವಾಗಿದ್ದರೆ ದೇಹವೂ ಆರೋಗ್ಯವಾಗಿರುವುದು. ಪ್ರವಾದಿ(ﷺ) ರವರ ಉಪದೇಶ ಹಾಗೆಯೇ ಇದೆ.

ಮಾನವೀಯ ಹಾಗೂ ಕರುಣೆಯ ಹೃದಯವು ವ್ಯಕ್ತಿಯನ್ನು ಬೇರ್ಪಡಿಸುತ್ತದೆ. ಆಧುನಿಕ ಸಮಾಜದಲ್ಲಿ ಸ್ವಂತ ಮಕ್ಕಳು, ಪತ್ನಿ, ಪತಿ, ಮಾತಾಪಿತರೊಂದಿಗೆ ಕೂಡಾ ಕರುಣೆ ತೋರಿಸದ ಒಂದು ಹೊಸ ಸಂಸ್ಕೃತಿ ಕಂಡುಬರುತ್ತಿದೆ. ಇದು ದೈಹಿಕ ಆರೋಗ್ಯದ ವಿಷಯದಲ್ಲಿ ಹೆಚ್ಚಿನ ಮುತುವರ್ಜಿ ವಹಿಸುತ್ತಿರುವ ಆಧುನಿಕ ಸಮಾಜದ ಒಂದು ವಿರೋಧಾಭಾಸದ ನೋಟವಾಗಿದೆ. ಕರುಣೆಯ ಪಸೆ ಬತ್ತಿದ ಹೃದಯಗಳು ಕರುಣಾಮಯಿಯಾದ ಅಲ್ಲಾಹನ ಕೃಪಾಕಟಾಕ್ಷದಿಂದ ವಂಚಿತವಾಗುತ್ತದೆ ಎಂದು ಪ್ರವಾದಿ(ﷺ) ರವರು ಕಲಿಸಿಕೊಟ್ಟಿದ್ದಾರೆ.

ಒಮ್ಮೆ ಪ್ರವಾದಿ(ﷺ) ರವರು ತಮ್ಮ ಮೊಮ್ಮಗನಾದ ಹಸನ್(رضي الله عنه) ರವರನ್ನು ಚುಂಬಿಸುವುದನ್ನು ನೋಡಿದ ಗ್ರಾಮೀಣ ಅರಬಿಯಾದ ಅಕ್‌ರಹ್(رضي الله عنه) ಆಶ್ಚರ್ಯದಿಂದ ಕೇಳಿದರು: “ನನಗೆ ಹತ್ತು ಮಂದಿ ಮಕ್ಕಳಿದ್ದಾರೆ. ನಾನು ಅವರಲ್ಲಿ ಯಾರನ್ನೂ ಚುಂಬಿಸಿಲ್ಲ.” ಆಗ ಅವರನ್ನು ನೋಡುತ್ತಾ ಪ್ರವಾದಿ(ﷺ) ರವರು ಹೀಗೆಂದರು: “ಕರುಣೆ ತೋರಿಸದವರಿಗೆ ಮರಳಿ ಕರುಣೆ ಲಭಿಸದು.” (ಬುಖಾರಿ ಮುಸ್ಲಿಂ)

ಕರುಣೆ ಮತ್ತು ಆರ್ದ್ರತೆ ಎಲ್ಲಾ ಸದ್ಗುಣಗಳನ್ನು ಮೊಳೆಯಿಸುವ ಅತ್ಯುತ್ತಮ ಸ್ವಭಾವಗಳಾಗಿವೆ. ಪ್ರವಾದಿ(ﷺ) ರವರು ನಿರ್ಮಲ ಹೃದಯದ ಅತ್ಯುತ್ತಮ ಮಾದರಿಯಾಗಿದ್ದರು. ಪ್ರವಾದಿ(ﷺ) ರವರು ಜೀವನದಲ್ಲಿ ಪರಮ ವೈರಿಗಳೊಂದಿಗೂ ಕರುಣೆಯಿಂದ ವ್ಯವಹರಿಸುತ್ತಿದ್ದುದನ್ನು ನಾವು ನೋಡಬಹುದಾಗಿದೆ. ಅವರು ಹೇಳಿದರು: “ಒಬ್ಬನಿಗೆ ಕರುಣೆಯ ಒಂದು ಪಾಲು ದಯಪಾಲಿಸಲ್ಪಟ್ಟಿದ್ದರೆ ನಿಶ್ಚಯವಾಗಿಯೂ ಅವನಿಗೆ ಒಳಿತಿನ ಒಂದು ಪಾಲು ದಯಪಾಲಿಸಲ್ಪಟ್ಟಿತು. ಒಬ್ಬನಿಗೆ ಅದು ತಡೆಯಲ್ಪಟ್ಟಿದ್ದರೆ ಅವನಿಗೆ ಒಳಿತಿನ ಪಾಲು ನಿರಾಕರಿಸಲ್ಪಟ್ಟಿತು.” (ಅಹ್ಮದ್ ತಿರ್ಮುದಿ)

ಪ್ರೀತಿ, ಕರುಣೆ, ಸಹಾನುಭೂತಿಗಳನ್ನೆಲ್ಲ ಪ್ರವಾದಿ(ﷺ) ರವರು ಸತ್ಯವಿಶ್ವಾಸದ ಪರಿಪೂರ್ಣತೆ ಹಾಗೂ ಅಲ್ಲಾಹನ ಅನುಗ್ರಹಕ್ಕೆ ಅರ್ಹವಾಗುವ ಉತ್ತಮ ಸ್ವಭಾವಗಳೆಂದು ಪರಿಗಣಿಸಿದ್ದರು. ಆದರೆ ಇಂದು ಕೆಲವರು ವಾತ್ಸಲ್ಯ ರಹಿತ ಕಟು ಹೃದಯವನ್ನೇ ಮಹತ್ವದ ಗುಣವೆಂದು ಭಾವಿಸಿದ್ದಾರೆ. ಎಲ್ಲಿಯಾದರೂ ಒಂದು ಸಂಸ್ಥೆಯ ಮುಖ್ಯಸ್ಥನಾದರೆ ಅಲ್ಲಿ ಅವರು ತಮ್ಮ ದರ್ಪ ಮತ್ತು ಸ್ವೇಚ್ಛಾಧಿಪತ್ಯದಿಂದ ಬೇರೆಯವರನ್ನು ಹಿಡಿತದಲ್ಲಿಟ್ಟುಕೊಳ್ಳಲು ಪ್ರಯತ್ನಿಸುವುದು ಸತ್ಯವಿಶ್ವಾಸ ಹಾಗೂ ಪ್ರವಾದಿಯ ಉಪದೇಶದಿಂದ ದೂರವಾಗಿರುವುದರ ಸೂಚನೆಯಾಗಿದೆ.

*46 ನೇ ಪುಟಕ್ಕೆ*




# ವಿನಮ್ರತೆ

✍ ಶೈಖ್ ಮುಹಮ್ಮದ್ ಅರೀಫೀ

ಒಮ್ಮೆ ನಾನು ಒಂದು ಬೃಹತ್ ಸಭೆಯಲ್ಲಿ ಉಪಸ್ಥಿತನಿದ್ದೆ. ಓರ್ವ ಶ್ರೀಮಂತ(?) ನನ್ನೊಂದಿಗೆ ಮಾತುಕತೆಯಲ್ಲಿ ತೊಡಗಿದ. ನನಗೆ ಇಷ್ಟವಿಲ್ಲದಿದ್ದರೂ ನಾನು ಅವನ ಮಾತುಗಳನ್ನು ಆಲಿಸಲು ನಿರ್ಬಂಧಿತನಾಗಿದ್ದೆ. ಅವನು ತನ್ನ ಮಾತಿನ ಮಧ್ಯೆ ಹೇಳಿದ: "ನಾನು ಒಬ್ಬ ಕಾರ್ಮಿಕನ ಬಳಿಯಿಂದ ಸರಿದು ಹೋಗುತ್ತಿದ್ದಾಗ ಅವನು ಸಲಾಂ ಹೇಳುತ್ತಾ ತನ್ನ ಕೈಯನ್ನು ನನ್ನ ಮುಂದೆ ಚಾಚಿದ. ನನಗದರಿಂದ ತುಂಬಾ ಕಸಿವಿಸಿಯಾಯಿತು. ಒಲ್ಲದ ಮನಸ್ಸಿನಿಂದ ನಾನು ಅವನ ಕೈಕುಲುಕಿದೆ." ಮುಂದುವರಿಸುತ್ತಾ ಅವನು ಜಂಭದಿಂದ ಹೇಳಿದ: "ಸಾಮಾನ್ಯವಾಗಿ ನಾನು ಯಾರೊಂದಿಗೂ ಹಸ್ತಲಾಘವ ಮಾಡುವ ರೂಢಿ ಇಲ್ಲ."

ನನಗೆ ಅಲ್ಲಾಹನ ಸಂದೇಶವಾಹಕರ(ﷺ) ವಿಧಾನ ಅಥವಾ ರೂಢಿ ನೆನಪಿಗೆ ಬಂತು. ಸಾಮಾನ್ಯರಲ್ಲಿ ಸಾಮಾನ್ಯರಾದ ಒಬ್ಬಳು ದಾಸಿ ಕೂಡ ಪ್ರವಾದಿ(ﷺ) ರವರನ್ನು ರಸ್ತೆಯಲ್ಲಿ ತಡೆದು ನಿಲ್ಲಿಸಿ ತನ್ನ ಮಾಲಕನು ಅವಳ ಮೇಲೆ ಅಕ್ರಮ ಅಥವಾ ದೌರ್ಜನ್ಯವನ್ನು ನಡೆಸುತ್ತಾನೆಂದು ದೂರಿದರೆ ತಕ್ಷಣ ಪ್ರವಾದಿ(ﷺ) ರವರು ಅವಳೊಂದಿಗೆ ಅವಳ ಮಾಲಕನನ್ನು ವಿಚಾರಿಸಲು ನಡೆದು ಬರುತ್ತಿದ್ದರು. ಪ್ರವಾದಿ(ﷺ) ರವರ ಒಂದು ಪ್ರಸಿದ್ಧ ವಚನವಿದೆ.

"ಯಾರ ಹೃದಯದಲ್ಲಿ ಒಂದು ಅಣುಗಾತ್ರದಷ್ಟು ಅಹಂಕಾರವಿರುವುದೋ ಅವರು ಸ್ವರ್ಗ ಪ್ರವೇಶಿಸಲಾರರು." (ಸಹೀಹ್ ಮುಸ್ಲಿಂ ಹದೀಸ್ ನಂ 91)

ನೀವು ಆಲಿಸಿರಬಹುದು, ಜನರು ಆಗಾಗ ಹೇಳುವುದಿದೆ. "ಇಂತಿಂತಹ ವ್ಯಕ್ತಿಗೆ ಬಹಳ ಜಂಭವಿದೆ. ಅವನು ಸ್ವೇಚ್ಛೆ ಮತ್ತು ಸ್ವಾರ್ಥದ ಕಾರಣದಿಂದಲೇ ಜನರು ಅವನನ್ನು ಇಷ್ಟಪಡುವುದಿಲ್ಲ."

ನೀವು ನಿಮ್ಮೊಂದಿಗೆ ಸಹಾಯ ಕೇಳಲು ಬಂದ ವ್ಯಕ್ತಿಯೊಡನೆ ಕೇಳಿ ನೋಡಿ: "ನೀವೇಕೆ ನಿಮ್ಮ ಸಮಸ್ಯೆಗೆ ನಿಮ್ಮ ನೆರೆಮನೆಯಾತನ ಸಹಾಯ ಪಡೆಯುವುದಿಲ್ಲ?" ಆಗ ಅವನು ಉತ್ತರಿಸುತ್ತಾನೆ: "ಅವನು ದೊಡ್ಡ ಅಹಂಭಾವಿ. ಅವನು ಸರಿಯಾಗಿ ಮುಖ ನೋಡಿ ಮಾತನಾಡುವುದೂ ಇಲ್ಲ. ಇಂತಹ ಸೌಜನ್ಯತೆ ಇಲ್ಲದ ಜನರಿಂದ ಸಹಾಯ ನಿರೀಕ್ಷಿಸುವುದಾದರೂ ಹೇಗೆ?"

ವಾಸ್ತವದಲ್ಲಿ ಜನರನ್ನು ನಿಕೃಷ್ಟರಾಗಿ ಕಾಣುವ ಮತ್ತು ತನ್ನನ್ನು ಒಬ್ಬ ಗಣ್ಯನೆಂದು ಭಾವಿಸುವ ಜನರು ಸಮಾಜದ ದೃಷ್ಟಿಯಲ್ಲಿ ತಿರಸ್ಕಾರಯೋಗ್ಯರಾಗಿಯೇ ಇರುತ್ತಾರೆ. ಭೂಮಿಯ ಮೇಲೆ ಜಂಭದಿಂದ ನಡೆಯುವ ಬಡವರು, ನಿರ್ಗತಿಕರು ಮತ್ತು ಅನಾಥರ ಕುರಿತು ಕರುಣೆ ಮತ್ತು ಅನುಕಂಪ ತೋರದವರು ವಾಸ್ತವದಲ್ಲಿ ಅಭಾಗ್ಯವಂತರೇ ಸರಿ.

ಅಲ್ಲಾಹನ ಸಂದೇಶವಾಹಕರು(ﷺ) ಮಕ್ಕಾವನ್ನು ವಶಪಡಿಸಿಕೊಳ್ಳಲು ಗಡಿಯೊಳಗೆ ಪ್ರವೇಶಿಸಿದರು. ಯಾವ ದಾರಿಯಲ್ಲೆಲ್ಲಾ ಶತ್ರುಗಳು ಅವರನ್ನು ಅಪಹಾಸ್ಯ ಮಾಡುತ್ತಿದ್ದರೋ, ಕಿರುಕುಳವನ್ನು ನೀಡುತ್ತಿದ್ದರೋ ಆ ರಸ್ತೆಯಲ್ಲೆಲ್ಲಾ ಅವರು ಸೈನ್ಯ ಸಮೇತ ಸಂಚರಿಸಿದರು. ಹಿಂದೆ ಆ ದಾರಿಯಲ್ಲಿ ಅವರು ನಡೆದಾಡುವಾಗ ಹಿಂದಿನಿಂದ "ಲೋ ಹುಚ್ಚಾ! ಮಾಟಗಾರ! ಸುಳ್ಳ! ನೀಚ!" ಎಂದು ಶತ್ರುಗಳು ಕೂಗಿ ಕರೆಯುತ್ತಿದ್ದುದು ವಾಡಿಕೆಯಾಗಿತ್ತು.

ಇಂದು ಪ್ರವಾದಿಗಳು ಆ ಪಟ್ಟಣದೊಳಗೆ ವಿರೋಧಿಗಳ ಸದ್ದಡಗಿಸಿದ ಓರ್ವ ದಿಗ್ವಿಜಯಿ ಆಡಳಿತಗಾರನಾಗಿ ಪ್ರವೇಶಿಸುತ್ತಿದ್ದಾರೆ. ಆ ನಗರದ ವಾಸಿಗಳನ್ನು ಅಲ್ಲಾಹು ಅವರಿಗೆ ಅಧೀನಪಡಿಸಿಕೊಟ್ಟಿದ್ದ. ಅಜೇಯನಾಗಿ ಆ ಪವಿತ್ರ ನಗರದೊಳಗೆ ಪ್ರವೇಶಿಸಿಸುವ ಆ ಚಾರಿತ್ರಿಕ ಕ್ಷಣದಲ್ಲಿ ಅವರ ಶೈಲಿ, ಅವರ ವರ್ತನೆ ಹೇಗಿರಬಹುದು?

ಅಬ್ದುಲ್ಲಾ ಬಿನ್ ಅಬೂಬಕ್ಕರ್(ﷺ) ವರದಿ ಮಾಡುತ್ತಾರೆ: "ಅಲ್ಲಾಹನ ಸಂದೇಶವಾಹಕರು(ﷺ) ವಾದಿ ಝೀತ್ವದಲ್ಲಿ ತಲುಪಿದಾಗ ಅವರ ಸವಾರಿ ಸ್ವಲ್ಪ ಸಮಯ ನಿಂತುಕೊಂಡಿತು. ಅವರು ತನ್ನ ತಲೆ ಮತ್ತು ಮುಖದ ಮೇಲೆ ಕೆಂಪು ಪೇಟ ಧರಿಸಿಕೊಂಡಿದ್ದರು. ಅಲ್ಲಾಹು ಅವರಿಗೆ ವಿಜಯವನ್ನು ದಯಪಾಲಿಸಿದ್ದ. ಅವನಿಗೆ ಕೃತಜ್ಞತೆ ಸೂಚಿಸುತ್ತಾ ಅವರು ಸರ್ವಶಕ್ತನ ಮುಂದೆ ತಲೆತಗ್ಗಿಸಿಕೊಂಡಿದ್ದರು. ಅವರ ಗಡ್ಡವು ಸವಾರಿಯ ಡುಬ್ಬವನ್ನು ಸವರುತ್ತಿತ್ತು." (ಸಿಲ್ಸಿಲತುಲ್ ಸಹೀಹ ಹದೀಸ್ ನಂ 1874)

ಅನಸ್(ﷺ) ವರದಿ ಮಾಡುತ್ತಾರೆ: "ಅಲ್ಲಾಹನ ಸಂದೇಶವಾಹಕರು(ﷺ) ಮಕ್ಕಾ ವಿಜಯದ ದಿನ ನಗರವನ್ನು ಪ್ರವೇಶಿಸಿಸುವಾಗ ಭಯಭಕ್ತಿಯಿಂದ ಅವರ ತಲೆಯು ಬಾಗಿಕೊಂಡಿತ್ತು. ಅವರ ದಾಡಿಯು ಒಂಟೆಯ ಡುಬ್ಬಕ್ಕೆ ತಾಗುತ್ತಿತ್ತು." (ಸೀರತುನ್ನಬವಿಯ್ಯ, ಇಬ್ನ್ ಹಿಶಾಮ್ 4/47/48)

ಇಬ್ನ್ ಮಸ್‌ಊದ್(ﷺ) ಹೇಳುತ್ತಾರೆ: "ಒಮ್ಮೆ ಒಬ್ಬ ವ್ಯಕ್ತಿ ಅಲ್ಲಾಹನ ಸಂದೇಶವಾಹಕರ(ﷺ) ಸನ್ನಿಧಿಗೆ ಬಂದು ಯಾವುದೋ ಒಂದು ವಿಷಯದ ಕುರಿತು ಅವರೊಂದಿಗೆ ಮಾತನಾಡಿದರು. ಆ ಸಂದರ್ಭದಲ್ಲಿ ಆ ವ್ಯಕ್ತಿಯ ಮುಖದಲ್ಲಿ ಕಂಡುಬಂದ ಸಂಕೋಚ ಮತ್ತು ಕಳವಳವನ್ನು ಗುರುತಿಸಿದ ಪ್ರವಾದಿ(ﷺ) ರವರು ಹೇಳಿದರು: ಸಮಾಧಾನದಿಂದ ಇರು. ನಾನು ಮಾಂಸವನ್ನು ಒಣಗಿಸಿ ತಿನ್ನುತ್ತಿದ್ದ ಓರ್ವ ಸಾಮಾನ್ಯ ಕುರೈಷ್ ಸ್ತ್ರೀಯ ಮಗನಾಗಿದ್ದೇನೆ." (ಅಲ್‌ಮುಸ್ತದ್ರಕ್, ಹಾಕಿಮ್ 2/466) ಅಲ್ಲಾಹನ ಸಂದೇಶವಾಹಕರು (ﷺ) ಹೇಳುತ್ತಿದ್ದರು: "ನಾನು ಓರ್ವ ದಾಸನಂತೆ ಜೀವಿಸುತ್ತೇನೆ ಮತ್ತು ಆಹಾರ ಸೇವಿಸುತ್ತೇನೆ." (ಅತ್ತಬಕಾತುಲ್ ಕುಬ್ರಾ, ಇಬ್ನ್ ಸಾದ್ 1/371)

ಓರ್ವ ಅರಬಿ ಕವಿ ಪ್ರವಾದಿ(ﷺ) ರವರು ಮೈಗೂಡಿಸಿಕೊಂಡಿದ್ದ ವಿನಮ್ರತೆಯನ್ನು ಬಹಳ ಸೊಗಸಾಗಿ ಚಿತ್ರೀಕರಿಸಿದ್ದಾರೆ:

"ದೀನನಾಗು, ತಾರೆಯಾಗಿ ಬೆಳಗುತ್ತಿಯಾ, ನೋಡುವವರು ನಿನ್ನನ್ನು ನೀರಿನ ಅಕ್ಷದಲ್ಲಿ ನೋಡುವರು. ತಾರೆಯಾದರೋ ಅವನಿಗಿಂತ ಬಹಳ ಉನ್ನತಿಯಲ್ಲಿರುವುದು." "ಗಾಳಿ ಎತ್ತರಕ್ಕೇರಿಸುವ ಹೊಗೆಯಂತೆ ನೀನಾಗಬೇಡ. ಅದೇನಿದ್ದರೂ ಕ್ಷುಲ್ಲಕ, ನಿಸ್ಸಾರವೇ ಸರಿ."

**ಉಪಸಂಹಾರ:** ಯಾರು ಅಲ್ಲಾಹನಿಗಾಗಿ ವಿನಮ್ರತೆಯನ್ನು ಮೈಗೂಡಿಸಿ ದೀನನಾಗಿ ಬಾಳುತ್ತಾನೋ ಅಲ್ಲಾಹು ಅವನನ್ನು ಉನ್ನತಿಗೇರಿಸುತ್ತಾನೆ. ವಿನಯವಂತನಿಗೆ ಅಲ್ಲಾಹು ಗೌರವವನ್ನು ಇಮ್ಮಡಿಗೊಳಿಸುತ್ತಾನೆ. ■

---

*44 ನೇ ಪುಟದಿಂದ*

## ಮಾನಸಿಕ ಆರೋಗ್ಯ

ಜೀವಜಾಲಗಳು ಸೇರಿದಂತೆ ಪ್ರತಿಯೊಂದರ ಮೇಲೆಯೂ ದಯೆ ಮತ್ತು ಕರುಣೆಯನ್ನು ತೋರಿಸುತ್ತಿದ್ದ ಪ್ರವಾದಿ(ﷺ) ರವರ ಕುರಿತು ಹೇಳಿದ ಉತ್ಕೃಷ್ಟ ಸ್ವಭಾವ ಗುಣಗಳು ಪ್ರತಿಯೊಬ್ಬ ನಾಯಕನು ಮೈಗೂಡಿಸಿಕೊಳ್ಳಬೇಕಾದ ಮಹತ್ವಪೂರ್ಣ ಅರ್ಹತೆಗಳಾಗಿವೆ. ಅಲ್ಲಾಹನು ಹೇಳುತ್ತಾನೆ:

﴿ فَبِمَا رَحْمَةٍ مِّنَ ٱللَّهِ لِنتَ لَهُمْ ۖ وَلَوْ كُنتَ
فَظًّا غَلِيظَ ٱلْقَلْبِ لَٱنفَضُّوا۟ مِنْ حَوْلِكَ ۖ ﴾

"(ಪ್ರವಾದಿಯವರೇ!) ನೀವು ಇವರ ಪಾಲಿಗೆ ಅತ್ಯಂತ ಸೌಮ್ಯ ಸ್ವಭಾವಿಯಾಗಿರುವುದು ಅಲ್ಲಾಹನ ಮಹಾ ಕೃಪೆಯಾಗಿದೆ. ನೀವು ಕಠಿಣ ಸ್ವಭಾವಿ ಮತ್ತು ಕಲ್ಲೆದೆಯವರಾಗಿರುತ್ತಿದ್ದರೆ ಇವರೆಲ್ಲರೂ ನಿಮ್ಮ ಸುತ್ತಮುತ್ತಲಿನಿಂತ ಚದುರಿ ಹೋಗುತ್ತಿದ್ದರು..." (3:159)

ತನ್ನ ಅಧೀನದಲ್ಲಿರುವವರಿಗೆ ಪ್ರಮಾದ ಸಂಭವಿಸಿದರೆ ಅವರನ್ನು ಪ್ರೀತಿಯಿಂದ ತಿದ್ದಿ ಕ್ಷಮಿಸುವಾಗ ಅನುಯಾಯಿಗಳನ್ನು ಒಲಿಸಿಕೊಳ್ಳಲು ಸಾಧ್ಯವಾಗುತ್ತದೆ. ಮನೆ, ಸ್ನೇಹಿತರು ಹಾಗೂ ಸಹಪ್ರವರ್ತಕರ ನಡುವೆ ಒಳಿತನ್ನು ಪ್ರಚುರಪಡಿಸುವವರಾಗಬೇಕಾದರೆ ಮಾನಸಿಕ ಆರೋಗ್ಯವನ್ನು ನೆಲೆ ನಿಲ್ಲಿಸುವುದು ಅನಿವಾರ್ಯ. ಅಲ್ಲಾಹನು ಅನುಗ್ರಹಿಸಲಿ. ■

# ಪರೀಕ್ಷೆ ಮತ್ತು ಸಹನೆ

ಅಲಿ(ﷺ) ಹೇಳುತ್ತಾರೆ: ನಾವು ಪ್ರವಾದಿ(ﷺ) ರವರ ಜೊತೆಯಲ್ಲಿ ಮಸೀದಿಯಲ್ಲಿ ಕುಳಿತಿದ್ದೆವು. ಆಗ ಮುಸ್‌ಅಬ್ ಬಿನ್ ಉಮೈರ್ (ﷺ) ರವರ ಆಗಮನವಾಗುತ್ತದೆ. ಅವರು ಅಲ್ಲಲ್ಲಿ ತೇಪೆ ಹಾಕಿದ ಬಟ್ಟೆಯನ್ನು ಧರಿಸಿದ್ದರು. ಅವರನ್ನು ನೋಡಿದಾಗ ಅವರ ಮೊದಲಿನ ಸ್ಥಿತಿ ಹಾಗೂ ಈಗಿನ ಪರಿಸ್ಥಿತಿಯನ್ನು ನೆನೆಸಿ ಪ್ರವಾದಿ(ﷺ) ರವರು ಅತ್ತುಬಿಟ್ಟರು. ಅನಂತರ ಅವರು ಕೇಳಿದರು: “ನಿಮ್ಮಲ್ಲೋರ್ವರು ಬೆಳಿಗ್ಗೆ ಒಂದು ವಸ್ತ್ರವನ್ನು ಧರಿಸಿ ಸಂಜೆಯಾಗುವಾಗ ಬೇರೊಂದು ವಸ್ತ್ರ ಧರಿಸುತ್ತಾರೆ. ನಿಮ್ಮ ಮುಂದಿರುವ ಒಂದು ಅನ್ನದ ತಟ್ಟೆಯನ್ನು ಬದಲಾಯಿಸಿ ಮತ್ತೊಂದನ್ನು ತಂದಿಡಲಾಗುತ್ತದೆ. ನಿಮ್ಮ ಮನೆಗಳಿಗೆ ಕಅ್‌ಬಕ್ಕೆ ಸಮಾನವಾದ ಒಂದು ಪರದೆಯನ್ನು ಹಾಕುವ ಒಂದು ಪರಿಸ್ಥಿತಿ ಸಂಜಾತವಾಗುವ ಪರಿಸ್ಥಿತಿಯ ಕುರಿತು ನಿಮಗೇನನ್ನಿಸು-ತ್ತದೆ?” (ಅಂದರೆ ಶ್ರೀಮಂತಿಕೆಯ ಅವಸ್ಥೆ). ಸ್ವಹಾಬಿಗಳು ಹೇಳಿದರು: “ಓ ಅಲ್ಲಾಹನ ಸಂದೇಶವಾಹಕರೇ! ಅಂದು ನಮ್ಮ ಪರಿಸ್ಥಿತಿ ಇಂದಿಗಿಂತ ಅದೆಷ್ಟೋ ಉತ್ತಮವಾಗಿರುತ್ತದೆ. ನಾವು ಆರಾಧನೆ-ಯಲ್ಲಿ ಕಾಲ ಕಳೆಯಬಹುದು. ಸಂಕಷ್ಟಗಳು ದೂರವಾಗಿರುತ್ತದೆ.” ಆಗ ಪ್ರವಾದಿ(ﷺ) ರವರು ಹೇಳುತ್ತಾರೆ: “ಹಾಗಲ್ಲ, ನಿಮ್ಮ ಮಟ್ಟಿಗೆ ಅಂದಿನ ಪರಿಸ್ಥಿತಿಗಿಂತ ಇಂದಿನ ಪರಿಸ್ಥಿತಿಯೇ ಉತ್ತಮ.” (ತಿರ್ಮುದಿ)

ಮುಸ್‌ಅಬ್ ಬಿನ್ ಉಮೈರ್(ﷺ) ಇಸ್ಲಾಮ್ ಸ್ವೀಕರಿಸುವುದಕ್ಕಿಂತ ಮೊದಲು ಶ್ರೀಮಂತರಾಗಿದ್ದರು. ದೇವ ಮಾರ್ಗದಲ್ಲಿ ಎಲ್ಲವನ್ನೂ ತ್ಯಾಗ ಮಾಡಿದ ಅವರಿಗೆ ಕೊನೆಗೆ ವಾಸಿಸಲು ಕೂಡಾ ಮನೆಯಿರದೆ ಮಸೀದಿಯ ವರಾಂಡದಲ್ಲಿ ಕಾಲಕಳೆಯಬೇಕಾದ ಅವಸ್ಥೆ ಬಂತು. ಪ್ರವಾದಿ(ﷺ) ರವರ ಅನುಚರರಲ್ಲಿ ಹೆಚ್ಚಿನವರು ತೊಡುವ ಬಟ್ಟೆಗೂ ತತ್ವಾರವೆನಿಸಿದ ಬಡವರಾಗಿದ್ದರು. ಹೀಗೆ ಬಡತನ ಮತ್ತು ಪರೀಕ್ಷೆ-ಗಳಲ್ಲಿ ಧೃತಿಗೆಡದೆ ಜೀವಿಸಿದ ಅನುಚರರಿಗೆ ಪ್ರವಾದಿ(ﷺ) ರವರು ನೀಡಿದ ಒಂದು ಎಚ್ಚರಿಕೆ ಮೇಲಿನ ವಚನದಲ್ಲಿದೆ.

ತಿಂದುಂಡು ಸುಖವಾಗಿ ಬದುಕಬೇಕೆನ್ನುವುದು ಪ್ರತಿಯೊಬ್ಬರ ಆಗ್ರಹವಾಗಿದೆ. ಸಂಕಷ್ಟಗಳು, ರೋಗ–ರುಜಿನ, ಪರೀಕ್ಷೆ, ಬಡತನ ಮುಂತಾದವುಗಳನ್ನೆಲ್ಲ ಮನುಷ್ಯನು ದ್ವೇಷಿಸುತ್ತಾನೆ. ಐಹಿಕ ಸುಖ–ಭೋಗಗಳ ಹೆಚ್ಚಳವು ಮನುಷ್ಯನನ್ನು ದೇವನಿಷೇಧ ಮತ್ತು ಅನೈತಿಕತೆಯೆಡೆಗೆ ಕೊಂಡೊಯ್ಯುತ್ತದೆ ಎನ್ನುವುದು ಒಂದು ವಾಸ್ತವಿಕತೆಯಾಗಿದೆ. ಆದುದರಿಂದಲೇ ಪ್ರವಾದಿ(ﷺ) ರವರು ಭೌತಿಕ ಅನುಕೂಲತೆಗಳ ಹೆಚ್ಚಳದ ಕಾಲಕ್ಕಿಂತ ಈ ಕಾಲವೇ ಉತ್ತಮ ಎಂದಿರುವರು.

ಆಡಂಬರದ ಜೀವನವು ಮನುಷ್ಯನನ್ನು ದೈವಿಕ ಚಿಂತನೆಗಳಿಲ್ಲದ ಒಂದು ಅವಸ್ಥೆಯೆಡೆಗೆ ಕೊಂಡೊಯ್ಯುವ ಸಾಧ್ಯತೆಯಿದೆ. ಬಯಸಿ-ದ್ದೆಲ್ಲವೂ ಲಭಿಸುವ ಪರಿಸ್ಥಿತಿ ಉಂಟಾದರೆ ಈ ನಿಟ್ಟಿನಲ್ಲಿರುವ ಅವನ ಅಭಿಲಾಷೆ ಮತ್ತು ಅವಸರವೂ ವರ್ಧಿಸುತ್ತದೆ. ಹಲಾಲ್, ಹರಾಮ್, ನೈತಿಕ, ಅನೈತಿಕ, ಸತ್ಯ, ಅಸತ್ಯ, ನ್ಯಾಯ, ಅನ್ಯಾಯ ಮುಂತಾದ ಯೋಚನೆಗಳಾವುದೂ ಅವನನ್ನು ಕಳಕುವುದಿಲ್ಲ. ಹೇಗಾದರೂ ಹೆಚ್ಚು ಸಂಪಾದಿಸಿ, ಹೆಚ್ಚು ಆಸ್ವದಿಸಬೇಕೆನ್ನುದರತ್ತಲೇ ಅವನ ಗಮನ ಕೇಂದ್ರೀಕೃತವಾಗಿರುತ್ತದೆ.

ಪ್ರವಾದಿ(ﷺ) ರವರು ಇನ್ನೊಂದು ಸಂದರ್ಭದಲ್ಲಿ ಹೀಗೆಂದಿರುವರು: “ನನ್ನ ನಂತರ ನಾನು ನಿಮ್ಮ ಮಟ್ಟಿಗೆ ಐಹಿಕ ಸುಖಾಡಂಬರಗಳು ಮತ್ತು ಅದರ ತಳಕು–ಬಳಕುಗಳ ಕುರಿತು ಭಯಪಡುತ್ತೇನೆ.” (ಬುಖಾರಿ ಮುಸ್ಲಿಮ್)

ಭೌತಿಕ ಸುಖವನ್ನು ಮಾತ್ರ ಆಗ್ರಹಿಸುವವರ ಬಗ್ಗೆ ಅಲ್ಲಾಹನು ಹೀಗೆ ವಿವರಿಸುತ್ತಾನೆ:

*48 ನೇ ಪುಟಕ್ಕೆ*

# ಕೋಮುವಾದ

ರಾಷ್ಟ್ರ, ವರ್ಗ, ಜಾತಿ, ಧರ್ಮದೊಂದಿಗಿರುವ ಕುರುಡು ಅಭಿಮಾನವು ಅನೇಕ ಅನರ್ಥಗಳಿಗೆ ವೇದಿಕೆಯನ್ನು ಸಜ್ಜುಗೊಳಿಸುತ್ತದೆ. ಪಂಗಡ, ವಿಭಾಗೀಯತೆ, ಸ್ವಜನಪಕ್ಷಪಾತ ಇದರ ಅನುಬಂಧಗಳಾಗಿವೆ. ತಾನು ಪ್ರತಿನಿಧಿಸುವ ವಿಭಾಗದ ಕೆಡುಕು ಮತ್ತು ತಪ್ಪುಗಳನ್ನು ಸರಿಯೆಂದು ಪರಿಗಣಿಸಿ ಅವುಗಳನ್ನು ಸಮರ್ಥಿಸುವ ಪ್ರವಣತೆ ಇಂದು ಸರ್ವವ್ಯಾಪಕವಾಗಿದೆ. ಅನ್ಯಾಯ-ವನ್ನು ಬೆಂಬಲಿಸುವುದು, ಅದಕ್ಕಾಗಿ ಪ್ರಚಾರದಲ್ಲಿ ಏರ್ಪಡುವುದು, ಅಧರ್ಮದ ಹೆಸರಲ್ಲಿ ಆಕ್ರಮಣಶೀಲರಾಗುವುದು, ಅದಕ್ಕೆ ಆದರ್ಶದ ವೇಷ ತೊಡಿಸುವ ಪ್ರವಣತೆ ಇಂದು ಸರ್ವಸಾಮಾನ್ಯ-ವಾಗಿದೆ. ಪ್ರೀತಿ ಮತ್ತು ಸಹಕಾರದ ಜಾಗದಲ್ಲಿ ದ್ವೇಷ ಮತ್ತು ಅಕ್ರಮ ಪ್ರತಿಷ್ಠಾಪನೆಗೊಂಡಿದೆ. ಜನಾಂಗೀಯ-ಕೋಮುಗಲಭೆಗಳು ದೊಡ್ಡ ಶಾಪವಾಗಿ ಜಗತ್ತನ್ನು ಘಾಸಿಗೊಳಿಸಿದೆ.

ಇಸ್ಲಾಮ್ ಇಂತಹ ಸಂಕುಚಿತತೆ ಮತ್ತು ಅಸಮಾನತೆಯನ್ನು ಬಲವಾಗಿ ವಿರೋಧಿಸುತ್ತದೆ. ಅನ್ಯಾಯದಲ್ಲಿ ತಮ್ಮ ಜನರನ್ನು ಬೆಂಬಲಿಸುವುದನ್ನು ಪ್ರವಾದಿ(ﷺ) ಯವರು ಕೋಮುವಾದವೆಂದು ಕರೆದಿದ್ದಾರೆ. ಯಾರು ಮಾಡುತ್ತಾರೆ ಎನ್ನುವುದಲ್ಲ, ಬದಲಾಗಿ ಏನು ಮಾಡುತ್ತಾರೆ ಎನ್ನುವುದು ಮುಖ್ಯವಾಗಿದೆ. ಅನ್ಯಾಯವನ್ನು ಯಾರು ಮಾಡಿದರೂ ಅದು ಅನ್ಯಾಯವೇ.

ಪ್ರವಾದಿ(ﷺ) ಹೇಳುತ್ತಾರೆ: “ಕೋಮುವಾದೆಡೆಗೆ ಆಮಂತ್ರಿಸುವವನು ನಮ್ಮವನಲ್ಲ. ಕೋಮುವಾದಕ್ಕಾಗಿ ಯುದ್ಧ ಮಾಡುವವನು ನಮ್ಮವ-ನಲ್ಲ. ಕೋಮುವಾದದ ಹೆಸರಲ್ಲಿ ಮೃತಪಡುವವನು ನಮ್ಮವನಲ್ಲ.” (ಅಬೂದಾವೂದ್) ■

*47 ನೇ ಪುಟದಿಂದ*

## ಪರೀಕ್ಷೆ ಮತ್ತು ಸಹನೆ

فَمِنَ ٱلنَّاسِ مَن يَقُولُ رَبَّنَآ ءَاتِنَا فِى ٱلدُّنْيَا وَمَا لَهُۥ فِى ٱلْـَٔاخِرَةِ مِنْ خَلَـٰقٍ ﴿٢٠٠﴾

“ಅವರಲ್ಲಿ ಕೆಲವರು, ಓ ನಮ್ಮ ಪ್ರಭೂ, ನಮಗೆ ಇಹಲೋಕದ-ಲ್ಲೇ ಎಲ್ಲವನ್ನೂ ಕೊಟ್ಟುಬಿಡು ಎನ್ನುವವರಿದ್ದಾರೆ. ಇಂತಹವರಿಗೆ ಪರಲೋಕದಲ್ಲಿ ಯಾವ ಪಾಲೂ ಇಲ್ಲ.” (2:200)

ಇದ್ದುದರಲ್ಲಿ ತೃಪ್ತಿಪಟ್ಟು ಕೃತಜ್ಞತೆ ಪ್ರಕಟಿಸುವುದು ಅಲ್ಲಾಹನ ಸಂಪ್ರೀತಿಗೆ ಪಾತ್ರರಾಗುವ ಕಾರ್ಯವಾಗಿದೆ. ಇಂತಹವರಿಗೆ ಅವನು ಸುಭಿಕ್ಷೆಯನ್ನು ನೀಡುತ್ತೇನೆಂದು ವಾಗ್ದಾನವಿತ್ತಿದ್ದಾನೆ.

وَإِذْ تَأَذَّنَ رَبُّكُمْ لَئِن شَكَرْتُمْ لَأَزِيدَنَّكُمْ ۖ وَلَئِن كَفَرْتُمْ إِنَّ عَذَابِى لَشَدِيدٌ ﴿٧﴾

“ನೀವು ಕೃತಜ್ಞರಾಗಿದ್ದರೆ ನಾನು ನಿಮಗೆ ಇನ್ನೂ ಹೆಚ್ಚು ಪ್ರದಾನ ಮಾಡುವೆನೆಂದೂ ನೀವು ಕೃತಘ್ನತೆ ತೋರಿದರೆ ನನ್ನ ಶಿಕ್ಷೆಯು ಅತ್ಯಂತ ಕಠಿಣವಾಗಿದೆಯೆಂದೂ ನಿಮ್ಮ ಪ್ರಭು ಎಚ್ಚರಿಕೆ ಕೊಟ್ಟಿರು-ವುದನ್ನು ಸ್ಮರಿಸಿರಿ.” (14:7) ■

# ಒಗ್ಗಟ್ಟಿನಿಂದಲೇ ವಿಜಯ



ಒಂದು ದಿನ ಬೇಟೆಗಾರನೊಬ್ಬ ಹಕ್ಕಿಗಳನ್ನು ಹಿಡಿಯಲು ಹೊಳೆಯ ತೀರದಲ್ಲಿ ಬಲೆ ಹಾಕಿದ. ಆ ಬಲೆಯಲ್ಲಿ ಕೆಲವು ಧಾನ್ಯಗಳನ್ನು ಬಿತ್ತಿದ. ಅದನ್ನು ನೋಡಿ ಅನೇಕ ಹಕ್ಕಿಗಳು ಬಲೆಗೆ ಬಂದವು. ಅವೆಲ್ಲವೂ ಬಲೆಯಲ್ಲಿ ಸಿಕ್ಕಿಹಾಕಿಕೊಂಡವು. ಇನ್ನೇನು ಮಾಡುವುದು? ಬುದ್ಧಿವಂತ ಹಕ್ಕಿಯೊಂದು, ನಾವೆಲ್ಲಾ ಒಟ್ಟಾಗಿ ಬಲೆಯಿಂದ ಹಾರೋಣ ಎಂದು ಅಭಿಪ್ರಾಯಪಟ್ಟಿತು. ಎಲ್ಲರೂ ಅದರ ಅಭಿಪ್ರಾಯವನ್ನು ಒಪ್ಪಿಕೊಂಡರು.

ಎಲ್ಲರೂ ಒಟ್ಟಾಗಿ  ಹಾರಿದವು. ಹಕ್ಕಿಗಳ ಗುಂಪು ಬಲೆಯೊಂದಿಗೆ ಹಾರುತ್ತಿರುವುದನ್ನು ಕಂಡು ಬೇಟೆಗಾರ ಆಶ್ಚರ್ಯಚಕಿತನಾದ. ಎಂತಹ ಒಗ್ಗಟ್ಟು! ಅವು ಒಟ್ಟು ಸೇರಿದ್ದರಿಂದಲೇ ಹಾರಲು ಸಾಧ್ಯವಾಗಿದೆ. ಏನಿದ್ದರೂ, ಏನು ಸಂಭವಿಸುತ್ತದೆಯೆಂದು ನೋಡೋಣ. ಅವನು ಹಕ್ಕಿಗಳನ್ನು ಹಿಂಬಾಲಿಸಿಕೊಂಡು ಹೊರಟ. ಹೀಗೆ ಹೋಗುತ್ತಿರುವಾಗ ದಾರಿಯಲ್ಲಿ ಒಬ್ಬರು ಅವನನ್ನು ಭೇಟಿಯಾಗುತ್ತಾರೆ.

“ನೀವು ಇಷ್ಟು ಅವಸರದಿಂದ ನಡೆಯುತ್ತಿರುವುದು ಎಲ್ಲಿಗೆ?” ಆ ವ್ಯಕ್ತಿ ಬೇಟೆಗಾರನೊಂದಿಗೆ ಕೇಳಿದ.

ಬೇಟೆಗಾರ ಮೇಲೆ ಹಾರುತ್ತಿರುವ ಹಕ್ಕಿಗಳನ್ನು ತೋರಿಸುತ್ತಾ ಹೇಳಿದ, “ನಾನು ಆ ಹಕ್ಕಿಗಳನ್ನು ಹಿಡಿಯಲು ಹೊರಟಿದ್ದೇನೆ.”

ಅವರು ನಗುತ್ತಾ ಹೇಳಿದರು: “ಅಲ್ಲಾಹನು ನಿಮಗೆ ಸ್ವಲ್ಪವಾದರೂ ಬುದ್ಧಿಯನ್ನು ದಯಪಾಲಿಸಲಿ! ನೀವು ಆ ಹಕ್ಕಿಗಳನ್ನು ಹಿಡಿಯಲು ಸಾಧ್ಯವೆಂದು ಭಾವಿಸಿರುವಿರಾ?”

“ಅದರಲ್ಲಿ ಒಂದು ಹಕ್ಕಿ ಮಾತ್ರವಿರುತ್ತಿದ್ದರೆ ನನಗೆ ಅದನ್ನು ಹಿಡಿಯಲು ಸಾಧ್ಯವಾಗುತ್ತಿರಲಿಲ್ಲ. ಆದರೆ ಅನೇಕ ಹಕ್ಕಿಗಳಿರುವುದರಿಂದ ಹಿಡಿಯಲು ಸಾಧ್ಯವಿದೆ. ಕಾದು ನೋಡಿರಿ.” ಬೇಟೆಗಾರ ಹೇಳಿದ.

ಬೇಟೆಗಾರ ಹೇಳಿದ್ದು ಸರಿಯಾಗಿತ್ತು. ರಾತ್ರಿಯಾದಾಗ ಪ್ರತಿಯೊಂದು ಹಕ್ಕಿಗೂ ತನ್ನ ಗೂಡಿಗೆ ಹೋಗಬೇಕೆಂದು ತೋಚಿತು. ಕೆಲವು ಹಕ್ಕಿಗಳ ಗೂಡು ಕೊಳದ ಸಮೀಪವಿರುವ ಮರದಲ್ಲಿತ್ತು. ಇನ್ನು ಕೆಲವು ಹಕ್ಕಿಗಳ ಗೂಡು ಬೆಟ್ಟ–ಗುಡ್ಡಗಳಲ್ಲಿದ್ದವು. ಬೇರೆ ಹಕ್ಕಿಗಳು ಪೇಟೆಯಲ್ಲಿರುವ ಮರಗಳಲ್ಲಿ ವಾಸಿಸುತ್ತಿದ್ದವು. ಒಂದೇ ಬಲೆಯಲ್ಲಿ ಸಿಲುಕಿಕೊಂಡಿದ್ದ ಅವುಗಳು ಬೇರೆ ಬೇರೆ ಸ್ಥಳಗಳಿಗೆ ಹೋಗುವುದಾದರೂ ಹೇಗೆ? ಆದರೆ ಅವು ಅದಕ್ಕಾಗಿ ಪರಿಶ್ರಮಿಸಿದವು. ಹಲವು ದಿಕ್ಕುಗಳಿಗೆ ಹಾರಿದವು. ಬಲೆಯೊಳಗಿದ್ದುಕೊಂಡು ಹೀಗೆ ನಾನಾ ಭಾಗಗಳಿಗೆ ಹಾರಿದರೆ ಅದರಿಂದ ಪ್ರಯೋಜನವೇನು? ಕೊನೆಗೆ ಅವು ಬಲೆಯೊಂದಿಗೆ ಬಿದ್ದು ಬಿಟ್ಟಿತು. ಬೇಟೆಗಾರನು ಓಡಿಹೋಗಿ ಎಲ್ಲಾ ಹಕ್ಕಿಗಳನ್ನು ಹಿಡಿದ. ಅವುಗಳು ಒಂದೇ ದಿಕ್ಕಿಗೆ ಹಾರುತ್ತಿದ್ದರೆ ಬೇಟೆಗಾರನಿಗೆ ಹಿಡಿಯಲು ಸಾಧ್ಯವಾಗುತ್ತಿರಲಿಲ್ಲ.

ಮಕ್ಕಳೇ, ಅಪಾಯದಲ್ಲಿ ಸಿಲುಕಿಕೊಂಡಾಗ ಅದರಿಂದ ಪಾರಾಗಬೇಕಾದರೆ ಎಲ್ಲರೂ ಒಗ್ಗಟ್ಟಾಗಿ ಬುದ್ಧಿವಂತಿಕೆಯಿಂದ ಕಾರ್ಯವೆಸಗಬೇಕು. ಪ್ರವಾದಿ(ﷺ) ರವರು ಹೇಳುತ್ತಾರೆ: “ನೀವು ಸಂಘಟಿತರಾಗಿ ನೆಲೆಗೊಳ್ಳಿರಿ. ತೋಳವು ಹಿಡಿಯುವುದು ಒಂಟಿ ಮೃಗವನ್ನಾಗಿದೆ.” ■